RNI No. KARKAN/2007/22111 ಸಂಪುಟ 12 ಸಂಚಿಕೆ 10 ಜುಲೈ 2018

₹ 20/-



ಐಹಿಕ ಮತ್ತು ಪಾರತ್ರಿಕ ವಿಜಯದ ಹಾದಿ

الصراط المستقيم

# ಸಿರಾತೇ ಮುಸ್ತಖೀಮ್

ಜಮೀಯತೇ ಅಹ್ಲೆ ಹದೀಸ್ ಕರ್ನಾಟಕ-ಗೋವಾ ಇದರ ಮುಖವಾಣಿ

ಸತ್ಯವಿಶ್ವಾಸಿಗಳ ಕೈಪಿಡಿ

## ನಜ್ದ್‌ನಲ್ಲಿ ಶೈತಾನನ ಕೊಂಬು

ಒಂದು ಅವಲೋಕನ

ಆಹಾರ–ಪಾನೀಯಗಳ ಶಿಷ್ಟಾಚಾರಗಳು





# الصراط المستقيم

ಐಹಿಕ ಮತ್ತು ಪಾರತ್ರಿಕ ವಿಜಯದ ಹಾದಿ

# ಸಿರಾತೇ ಮುಸ್ತಖೀಮ್

ಸತ್ಯವಿಶ್ವಾಸಿಗಳ ಕೈಪಿಡಿ

ಸಂಪುಟ 12 ಸಂಚಿಕೆ 10

ذو القعدة ١٤٣٩ هـ

**ಜುಲೈ 2018**



*ಮಾಲಕರು, ಮುದ್ರಕರು ಮತ್ತು ಪ್ರಕಾಶಕರು:*

**ಮುಹಮ್ಮದ್ ಅಲಿ**

ದಾವಾ ಪಬ್ಲಿಕೇಶನ್ಸ್,
ಹಿರಾ ಕಾಂಪ್ಲೆಕ್ಸ್,
ಡೋರ್ ನಂ. 2-184/11,
2 ನೇ ಬ್ಲಾಕ್, ಕಾಟಿಪಳ್ಳ ಪೋಸ್ಟ್,
ಮಂಗಳೂರು - 575 030

*ಸಂಪಾದಕರು:*

**ಪಿ. ಅಬ್ದುಸ್ಸಲಾಂ ಕಾಟಿಪಳ್ಳ**

Mob: 9986282449
Email: asshahadat@yahoo.co.in

*ಮುಖಪುಟ ವಿನ್ಯಾಸ:*

**ಎ.ಎಸ್ಕೆ.**

*ಮುದ್ರಣ:*

Akshara Printers,
2nd Block, Katipalla,
Mangaluru. D.K.


## ಒಳಪುಟಗಳಲ್ಲಿ

### ಸಂಪಾದಕೀಯ


- ಸೃಷ್ಟಿಕರ್ತನು ಸೃಷ್ಟಿಗಳಂತಲ್ಲ.....02


### ಈ ಸಂಚಿಕೆಯಲ್ಲಿ


- ನಜ್ದ್‌ನಲ್ಲಿ ಶೈತಾನನ ಕೊಂಬು—ಒಂದು ಅವಲೋಕನ.....06
- ಇಸ್ಲಾಮ್ ಪ್ರತಿಪಾದಿಸುವ ಆರ್ಥಿಕ ಸಿದ್ಧಾಂತ.....11
- ಆಹಾರ–ಪಾನೀಯಗಳ ಶಿಷ್ಟಾಚಾರಗಳು.....18
- ಪ್ರವಾದಿ ನೂಹ್(عليه السلام): ದೌತ್ಯ ಮತ್ತು ಸಂದೇಶ.....31
- ರಹಸ್ಯವಾದ ಇಬಾದತ್ (ಆರಾಧನೆ).....37
- ಪ್ರವಾದಿತ್ವ ಮತ್ತು ಪಾಂಡಿತ್ಯ.....41
- ಮರಣಾನಂತರ ಜೀವನ.....43



Printed, published & owned by Muhammad Ali, Dawa Publications, Hira Complex, 2-184/11, 2nd Block, Katipalla Post, Mangaluru - 575 030. Editor: P. Abdussalam, Printed at: Akshara Printers, 2nd Block, Katipalla Post, Mangaluru. D. K. KARNATAKA




بسم الله الرحمن الرحيم

الحَمْدُ لِلّٰهِ رَبِّ العَالَمِينَ الصَّلَاةُ وَالسَّلَامُ عَلَى أَفْضَلِ الأَنْبِيَاءِ وَالمُرْسَلِينَ
وَعَلَى آلِهِ وَصَحْبِهِ أَجْمَعِينَ أَمَّا بَعْدُ

# ಸೃಷ್ಟಿಕರ್ತನು ಸೃಷ್ಟಿಗಳಂತಲ್ಲ

ಪ್ರವಾದಿ ಮುಹಮ್ಮದ್(ﷺ) ರು ಸತ್ಯದ ಸಂದೇಶದೊಂದಿಗೆ ಜನರ ಬಳಿಗೆ ತೆರಳಿದಾಗ ಅವರು ಪ್ರವಾದಿ(ﷺ) ಯವರ ಕುರಿತು ಮಾಟಗಾರ, ಮತಿಭ್ರಮಣೆಗೊಳಗಾದವ, ಕವಿ, ಜ್ಯೋತಿಷಿ ಎಂದೆಲ್ಲ ಆರೋಪಿಸಿದರು. ಮಾತ್ರವಲ್ಲದೆ ನೀವು ಪ್ರವಾದಿಯಾಗಿದ್ದರೆ ಅದನ್ನು ಸಾಬೀತುಪಡಿಸಲು ದೃಷ್ಟಾಂತಗಳನ್ನು ತರಬೇಕೆಂದೂ ಅವರು ಬೇಡಿಕೆ ಮುಂದಿಟ್ಟರು. ಅವರು ಪ್ರವಾದಿಗಳು ಇತರ ಜನರಂತೆ ಅನ್ನ ಪಾನೀಯಗಳನ್ನು ಸೇವಿಸುವುದು ಹಾಗೂ ಪೇಟೆಯಲ್ಲಿ ನಡೆದಾಡುವ ಕುರಿತು ಆಶ್ಚರ್ಯಪಟ್ಟರು. ಇಂತಹ ಕಾರ್ಯಗಳನ್ನೆಲ್ಲ ಮಾಡುತ್ತಿರುವ ಅವರು ಪ್ರವಾದಿಯಾಗುವುದು ಹೇಗೆ ಎನ್ನುವುದು ಅವರ ಪ್ರಶ್ನೆಯಾಗಿತ್ತು. ಅಲ್ಲಾಹನ ಸಂದೇಶವಾಹಕನಾಗಬೇಕಾದರೆ ಆ ವ್ಯಕ್ತಿಯಲ್ಲಿ ಅತಿಮಾನುಷಿಕ ಸಾಮರ್ಥ್ಯಗಳು, ಅಗೋಚರ ಜ್ಞಾನ ಹಾಗೂ ಶಿಫಾರಸು ಮಾಡುವ ಅಧಿಕಾರಗಳೆಲ್ಲವೂ ಇರಬೇಕೆನ್ನುವುದು ಅವರ ಕಲ್ಪನೆಯಾಗಿತ್ತು. ಈ ಕಲ್ಪನೆ ಶುದ್ಧ ತಪ್ಪೆಂದು ಸ್ಪಷ್ಟಪಡಿಸುತ್ತಾ ಅಲ್ಲಾಹನು ಹೇಳುತ್ತಾನೆ.

﴿ وَلَآ أَقُولُ لَكُمۡ عِندِي خَزَآئِنُ ٱللَّهِ وَلَآ أَعۡلَمُ ٱلۡغَيۡبَ وَلَآ أَقُولُ
إِنِّي مَلَكٞ وَلَآ أَقُولُ لِلَّذِينَ تَزۡدَرِيٓ أَعۡيُنُكُمۡ لَن يُؤۡتِيَهُمُ ٱللَّهُ خَيۡرًاۖ
ٱللَّهُ أَعۡلَمُ بِمَا فِيٓ أَنفُسِهِمۡ إِنِّيٓ إِذٗا لَّمِنَ ٱلظَّٰلِمِينَ ٣١ ﴾

"ನನ್ನ ಬಳಿ ಅಲ್ಲಾಹನ ಭಂಡಾರವಿದೆಯೆಂದು ನಾನು ನಿಮ್ಮೊಡನ ಹೇಳುವುದಿಲ್ಲ. ನಾನು ಪರೋಕ್ಷದ ಜ್ಞಾನಿಯೆಂದೂ ಹೇಳುವುದಿಲ್ಲ. ನಾನೊಬ್ಬ ದೇವಚರನಾಗಿದ್ದೇನೆಂದೂ ನಾನು ವಾದಿಸುವುದಿಲ್ಲ. ನಿಮ್ಮ ದೃಷ್ಟಿಗೆ ಕೀಳಾಗಿ ಕಾಣಿಸುತ್ತಿರುವವರಿಗೆ ಅಲ್ಲಾಹನು ಒಳಿತನ್ನೇನೂ ನೀಡಿರುವುದಿಲ್ಲವೆಂದೂ ನಾನು ಹೇಳಲಾರೆ. ಅವರ ಅಂತಃಕರಣದ ಸ್ಥಿತಿಯನ್ನು ಅಲ್ಲಾಹನೇ ಚೆನ್ನಾಗಿ ಬಲ್ಲನು. ನಾನು ಹಾಗೆ ಹೇಳಿಬಿಟ್ಟರೆ ಅಕ್ರಮಿಯಾದೇನು." (11:31)

1400 ವರ್ಷಗಳಿಗಿಂತ ಮೊದಲು ಅವತೀರ್ಣಗೊಂಡಿರುವ ಈ ಸೂಕ್ತವನ್ನು ಪಾರಾಯಣ ಮಾಡುತ್ತಿರುವಾಗ

ಮಹಾತ್ಮರು ಮೃತರಾಗಿ ಮಣ್ಣಾಗಿದ್ದರೂ ಅವರಿಗೆ ಆಲಿಸುವ ಮತ್ತು ವೀಕ್ಷಿಸುವ ಸಾಮರ್ಥ್ಯ ನಷ್ಟವಾಗಿರದೆ, ಅವರನ್ನು ಯಾರು ಎಲ್ಲಿ, ಯಾವಾಗ ಮತ್ತು ಯಾವ ಸಮಯದಲ್ಲಿ ಪ್ರಾರ್ಥಿಸಿದರೂ ಅದಕ್ಕೆ ಅವರು ತಕ್ಷಣ ಉತ್ತರಿಸುತ್ತಾರೆಂದೂ ಅವರು ತಮಗಾಗಿ ಅಲ್ಲಾಹನೊಂದಿಗೆ ಶಿಫಾರಸ್ಸು ಮಾಡುತ್ತಾರೆಂದೂ ನಂಬುವ ಹಲವರು ನಮ್ಮ ಸುತ್ತಮುತ್ತಲಲ್ಲಿದ್ದಾರೆ.

“ಪ್ರವಾದಿಗಳಲ್ಲಿ ಅತ್ಯುತ್ತಮರಾದ ನನ್ನ ಯಜಮಾನರಾದ ಪ್ರವಾದಿಯವರೇ, ಅಂತ್ಯದಿನದಲ್ಲಿ ನೀವು ನಮಗಾಗಿ ಶಿಫಾರಸು ಮಾಡಿರಿ. ಹಾಂ. ಅದು ನಷ್ಟವಾದರೆ ನಮ್ಮ ಪರಿಸ್ಥಿತಿ ಭೀಕರವಾಗುತ್ತದೆ” ಎಂದು ಮಂಕೂಸ್ ಮೌಲಿದ್‌ನಲ್ಲಿ ಬರೆದಿಟ್ಟಿರುವುದನ್ನು ಭಕ್ತಿಯೊಂದಿಗೆ ಹಾಡುತ್ತಿರುವವರ ವಿಶ್ವಾಸದ ಕುರಿತು ಯೋಚಿಸಿರಿ. ಇವರು ಪ್ರವಾದಿ(ﷺ) ಯವರಿಗೆ ಅಲ್ಲಾಹನೊಂದಿಗೆ ಶಿಫಾರಸು ಮಾಡಿ ನಮ್ಮನ್ನು ನರಕದಿಂದ ರಕ್ಷಿಸುವ ಸಾಮರ್ಥ್ಯವಿದೆ-ಯೆಂದು ನಂಬುತ್ತಾರೆ. ಇವರು ಈ ಲೋಕದ ಕಾನೂನು ವ್ಯವಸ್ಥೆಯೊಂದಿಗೆ ಹೋಲಿಸಿಕೊಂಡು ಅಪರಾಧಿಯಾಗಿ-ದ್ದರೂ ಪರಲೋಕದಲ್ಲಿ ಶಿಫಾರಸ್ಸಿನ ಮೂಲಕ ರಕ್ಷಣೆ ಹೊಂದಬಹುದೆಂದು ಮೂಢ ಕಲ್ಪನೆಯನ್ನಿಟ್ಟುಕೊಂಡಿದ್ದಾರೆ.

ನಮ್ಮ ಪಾಪಗಳನ್ನು ಪ್ರವಾದಿಗಳು ಅಥವಾ ಶೈಖ್‌ರೊಂದಿಗೆ ನೇರವಾಗಿ ನಿವೇದಿಸಿಕೊಳ್ಳಬೇಕು. ಆಗ ಅವರು ನಮಗಾಗಿ ಶಿಫಾರಸು ಮಾಡಿ, ನರಕದಿಂದ ವಿಮುಕ್ತಗೊಳಿಸುವರೆಂದು ಇವರ ನಂಬಿಕೆಯಾಗಿದೆ. ಒಬ್ಬ ಅಪರಾ-ಧಿಯನ್ನು ಪೊಲೀಸರು ವಿ.ಐ.ಪಿ.ಯ ಶಿಫಾರಸಿನ ಮೇರೆಗೆ ಬಿಟ್ಟುಬಿಡುವಂತೆ ಯಾವುದಾದರೂ ವಲಿಯ್ಯ್ ಶೈಖ್ ಅಥವಾ ಪ್ರವಾದಿಯ ಶಿಫಾರಸ್ಸಿದ್ದರೆ ಅಂತಹವರನ್ನು ಅಲ್ಲಾಹನು ನರಕಶಿಕ್ಷೆಗೆ ಗುರಿಪಡಿಸುವುದಿಲ್ಲವೆಂದು ಮುಸ್ಲಿ-ಯಾರ್‌ಗಳು ಜನರಿಗೆ ಕಲಿಸಿಕೊಡುತ್ತಿದ್ದಾರೆ.

ಇಲ್ಲಿ ಹಣ ಮತ್ತು ಪ್ರಭಾವವಿದ್ದರೆ ಪ್ರಧಾನಿಯವರ ಮೇಲೂ ಪ್ರಭಾವ ಬೀರಿ ನಮಗೆ ಬೇಕಾದುದನ್ನು ಸಾಧಿಸಬಹು-ದಾಗಿದೆ. ಅಂತ್ಯದಿನವು ಹಣ, ಪ್ರಭಾವ, ಶಿಫಾರಸು, ಮಕ್ಕಳು, ಪತ್ನಿಯರು, ಕುಟುಂಬ, ಮಿತ್ರರು ಇವುಗಳಾವುದೂ ಯಾವುದೇ ಉಪಕಾರ ಮಾಡದ ದಿನವಾಗಿದೆ.

ಸ್ವಂತ ಚಿಕ್ಕಪ್ಪನನ್ನು ಕೂಡಾ ಸನ್ಮಾರ್ಗಕ್ಕೆ ತಂದು ಸ್ವರ್ಗವಾಸಿಯನ್ನಾಗಿ ಮಾಡಲು ಸಾಧ್ಯವಿಲ್ಲದ ಪ್ರವಾದಿ(ﷺ) ಯವರು ತಮ್ಮ ಪ್ರಾರ್ಥನೆಯನ್ನು ಆಲಿಸಿ ಸ್ವರ್ಗ ಕೊಡಿಸುತ್ತಾರೆಂದು ನಂಬುವುದಕ್ಕಿಂದ ದೊಡ್ಡ ಮೂರ್ಖತನ ಬೇರೆ ಯಾವುದಿದೆ? ಅಲ್ಲಾಹನು ಹೇಳುತ್ತಾನೆ:

﴿ ٱللَّهُ لَآ إِلَٰهَ إِلَّا هُوَ ٱلۡحَيُّ ٱلۡقَيُّومُۚ لَا تَأۡخُذُهُۥ سِنَةٞ وَلَا نَوۡمٞۚ لَّهُۥ مَا فِي ٱلسَّمَٰوَٰتِ
وَمَا فِي ٱلۡأَرۡضِۗ مَن ذَا ٱلَّذِي يَشۡفَعُ عِندَهُۥٓ إِلَّا بِإِذۡنِهِۦۚ يَعۡلَمُ مَا بَيۡنَ أَيۡدِيهِمۡ
وَمَا خَلۡفَهُمۡۖ وَلَا يُحِيطُونَ بِشَيۡءٖ مِّنۡ عِلۡمِهِۦٓ إِلَّا بِمَا شَآءَۚ وَسِعَ كُرۡسِيُّهُ
ٱلسَّمَٰوَٰتِ وَٱلۡأَرۡضَۖ وَلَا يَـُٔودُهُۥ حِفۡظُهُمَاۚ وَهُوَ ٱلۡعَلِيُّ ٱلۡعَظِيمُ ٢٥٥ ﴾

“ಅಲ್ಲಾಹು ಚಿರಂತನನು. ಸ್ವಯಂ ಜೀವಂತನು. ಅಖಿಲ ಪ್ರಪಂಚದ ನಿಯಂತ್ರಕನಾದ ಆತನ ಹೊರತು ಆರಾಧ್ಯರಾರೂ ಇಲ್ಲ. ಅವನಿಗೆ ತೂಕಡಿಕೆಯಾಗಲಿ ನಿದ್ರೆಯಾಗಲಿ ಬಾಧಿಸುವುದಿಲ್ಲ. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿ ಇರುವುದೆಲ್ಲವೂ ಆತನದೇ. ಆತನ ಸನ್ನಿಧಿಯಲ್ಲಿ ಆತನ ಅಪ್ಪಣೆಯಿಲ್ಲದೆ ಶಿಫಾರಸು ಮಾಡತ-ಕ್ಕವನಾರಿದ್ದಾನೆ? ದಾಸರ ಮುಂದಿರುವುದನ್ನೂ ಆತನು ಬಲ್ಲನು. ಅವರಿಂದ ಮರೆಯಾಗಿರುವುದನ್ನೂ ಆತನು ಬಲ್ಲನು. ಆತನು ಸ್ವಯಂ ತಿಳಿಯಗೊಡಿಸುವ ಹೊರತು ಆತನ ಜ್ಞಾನ ಭಂಡಾರದಿಂದ ಯಾವ ವಿಷಯವನ್ನೂ

ಅವರು ತಿಳಿಯಲಾರರು. ಅವನ ಅಧಿಕಾರವು ಆಕಾಶಗಳನ್ನೂ ಭೂಮಿಯನ್ನೂ ವ್ಯಾಪಿಸಿದೆ. ಅವುಗಳ ಸಂರಕ್ಷಣೆಯು ಆತನಿಗೆ ದಣಿಸುವಂತಹ ಕಾರ್ಯವಲ್ಲ. ಅವನು ಏಕೈಕ ಮಹೋನ್ನತನೂ ಮಹತ್ವಪೂರ್ಣನೂ ಆಗಿದ್ದಾನೆ.” (2:255)

ಪಾಪಿಗಳು ಅಲ್ಲಾಹನೊಂದಿಗೆ ನೇರವಾಗಿ ಪ್ರಾರ್ಥಿಸುವುದಕ್ಕಿಂತ ಮಹಾತ್ಮರನ್ನು ಮಧ್ಯವರ್ತಿಗಳನ್ನಾಗಿ ಮಾಡಿಕೊಂಡು ಅವರೊಂದಿಗೆ ಪ್ರಾರ್ಥಿಸುವುದು ಪ್ರಯೋಜನಕಾರಿಯೆಂದು ಹೇಳುವವರು ಕುರ್‌ಆನಿನ ಈ ವಚನವನ್ನು ಗಮನಿಸಲಿ.

﴿ قُلْ يَٰعِبَادِىَ ٱلَّذِينَ أَسْرَفُوا۟ عَلَىٰٓ أَنفُسِهِمْ لَا تَقْنَطُوا۟ مِن رَّحْمَةِ
ٱللَّهِ ۚ إِنَّ ٱللَّهَ يَغْفِرُ ٱلذُّنُوبَ جَمِيعًا ۚ إِنَّهُۥ هُوَ ٱلْغَفُورُ ٱلرَّحِيمُ ٥٣ ﴾

“ಹೇಳಿರಿ. ತಮ್ಮ ಮೇಲೆಯೇ ಅತಿರೇಕವೆಸಗಿಕೊಂಡಿರುವ ನನ್ನ ದಾಸರೇ ಅಲ್ಲಾಹನ ಕರುಣೆಯ ಬಗ್ಗೆ ನಿರಾಶರಾಗಬೇಡಿರಿ. ನಿಶ್ಚಯವಾಗಿಯೂ ಅಲ್ಲಾಹನು ಸಕಲ ಪಾಪಗಳನ್ನೂ ಕ್ಷಮಿಸಿಬಿಡುತ್ತಾನೆ. ಅವನು ಅತ್ಯಂತ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.” (39:53)

ನಾವು ಇಂತಹ ಸೃಷ್ಟಿಕರ್ತನೊಂದಿಗೆ ನಮ್ಮ ಇಚ್ಛಾಸಫಲತೆಗಾಗಿ ಪ್ರಾರ್ಥಿಸಬೇಕೋ ಅಥವಾ ಸೃಷ್ಟಿಗಳೊಂದಿಗೋ? ಸ್ವಂತ ಆತ್ಮದೊಂದಿಗೆ ಅತಿರೇಕವೆಸಗಿದ ದಾಸರೊಂದಿಗೆ ಅಲ್ಲಾಹನು ನೀವು ನನ್ನೊಂದಿಗೆ ಪ್ರಾರ್ಥಿಸಿದರೆ ನಾನು ನಿಮ್ಮ ಪಾಪಗಳನ್ನು ಕ್ಷಮಿಸಿಬಿಡುತ್ತೇನೆ ಮತ್ತು ನನ್ನ ಕರುಣೆಯ ಬಗ್ಗೆ ನೀವು ನಿರಾಶರಾಗಬೇಡಿರೆಂದು ಅಲ್ಲಾಹನು ನೀಡಿರುವ ವಾಗ್ದಾನಕ್ಕೆ ಇವರು ಯಾವುದ ಬೆಲೆ ಕಲ್ಪಿಸದಿರುವುದೇಕೆ?

ಲೋಕದ ಯಾವುದೇ ಭೂಪ್ರದೇಶದಲ್ಲಿ ನಿಂತುಕೊಂಡು ಯಾವುದೇ ಭಾಷೆಯಲ್ಲಿ ಪ್ರಾರ್ಥಿಸಿದರೂ ಅದೇ ಕ್ಷಣದಲ್ಲಿ ಆಲಿಸಿ ಉತ್ತರ ನೀಡಲು ಹಾಗೂ ಆ ಪ್ರಾರ್ಥನೆಯನ್ನು ಅಲ್ಲಾಹನಿಗೆ ತಲುಪಿಸುವ ಸಾಮರ್ಥ್ಯ ಪ್ರವಾದಿಗಳು, ಮೊಹಿಯುದ್ದೀನ್ ಶೈಖ್, ರಿಫಾಯಿ ಶೈಖ್‌ರಿಗೆ ನೀಡಲಾಗಿದೆ ಎನ್ನುವುದಕ್ಕೆ ಪುರಾವೆ ಎಲ್ಲಿದೆ? ಹಾಗೆ ವಿಶ್ವಾಸವಿರಿಸುವವರ ಸ್ಥಾನ ಇಸ್ಲಾಮಿನ ಒಳಗಿದೆಯೋ ಅಥವಾ ಹೊರಗಿದೆಯೋ? ಇವರ ವಿಶ್ವಾಸ ಪ್ರಕಾರ ಅತ್ಯಧಿಕ ಸಾಮರ್ಥ್ಯವಿರುವವರು ಅಲ್ಲಾಹನೋ ಅಥವಾ ಮಹಾತ್ಮರೋ? ಅಲ್ಲಾಹನಿಗಿದೆಯೆಂದಾದರೆ ಮಹಾತ್ಮರೊಂದಿಗೆ ಏಕೆ ಪ್ರಾರ್ಥಿಸಬೇಕು?

ಅಲ್ಲಾಹನನ್ನು ಹೌಳ್‌ಗೆಸೆದು, ಮಲಕುಲ್ ಮೌತನ್ನು ಬಲವಂತವಾಗಿ ಹಿಂದೆ ಕಳುಹಿಸಿ, ಸ್ವಯಂ ಕಅ್‌ಬಾವನ್ನೇ ತಮ್ಮ ಸುತ್ತಲೂ ಪ್ರದಕ್ಷಿಣೆ ಮಾಡುವಂತೆ ಮಾಡಿದ ಶೈಖ್‌ಗಳ ವೀರಗಾಥೆಯನ್ನು ಶುಶ್ರಾವ್ಯವಾಗಿ ಹಾಡುವ ಇವರ ದೃಷ್ಟಿಯಲ್ಲಿ ಅಲ್ಲಾಹನಿಗಿರುವ ಸ್ಥಾನಮಾನವೇನು? ಅಸ್ತಗ್ಫಿರುಲ್ಲಾಹ್...

ಪರಮೋನ್ನತನೂ, ಅಖಿಲ ಚರಾಚರಗಳ ಸೃಷ್ಟಿಕರ್ತನೂ ನಿಯಂತ್ರಕನೂ ಆದ ಪರಮ ದಯಾಮಯನಾದ ಅಲ್ಲಾಹನನ್ನು ಇವರು ತಿಳಿದುಕೊಳ್ಳಬೇಕಾದ ರೀತಿಯಲ್ಲಿ ತಿಳಿದುಕೊಳ್ಳದಿರುವ ಕಾರಣದಿಂದಲೇ ಇಂತಹ ಅಸಂಬದ್ಧ ವಿಶ್ವಾಸಗಳ ಮೊರೆ ಹೋಗಿದ್ದಾರೆ ಎಂಬುದರಲ್ಲಿ ಸಂಶಯವಿಲ್ಲ.

ನಮ್ಮ ಬೇಡಿಕೆಗಳ ಈಡೇರಿಕೆಗಾಗಿ ನಾವು ಈ ಲೋಕದಲ್ಲಿ ಮೊತ್ತಮೊದಲು ಸಂಪರ್ಕಿಸುವುದು ನಮಗೆ ಪರಿಚಿತರಾದ ಯಾರಾದರೂ ರಾಜಕಾರಣಿ, ಅಧಿಕಾರಿ ಅಥವಾ ಗಣ್ಯ ವ್ಯಕ್ತಿಗಳನ್ನಾಗಿದೆ. ಪರಲೋಕದ ವಿಷಯದಲ್ಲಿಯೂ ಹಾಗೆಯೇ ಇರಬೇಕಲ್ಲವೇ? ನಮಗೆ ಅತ್ಯಂತ ನಿಕಟವರ್ತಿಯಾಗಿರುವುದು ಯಾರು? ಪವಿತ್ರ

ಕುರ್‌ಆನ್ ಹೀಗೆನ್ನುತ್ತದೆ.

﴿ وَإِذَا سَأَلَكَ عِبَادِى عَنِّى فَإِنِّى قَرِيبٌ ۖ أُجِيبُ دَعْوَةَ ٱلدَّاعِ إِذَا
دَعَانِ ۖ فَلْيَسْتَجِيبُوا۟ لِى وَلْيُؤْمِنُوا۟ بِى لَعَلَّهُمْ يَرْشُدُونَ ﴿١٨٦﴾ ﴾

“ನನ್ನ ದಾಸರು ನಿಮ್ಮೊಡನೆ ನನ್ನ ಬಗ್ಗೆ ಕೇಳಿದರೆ, ನಾನು ಅವರಿಗೆ ನಿಕಟನಾಗಿದ್ದೇನೆಂದೂ, ಪ್ರಾರ್ಥಿಸುವವನು ನನ್ನನ್ನು ಕರೆದು ಪ್ರಾರ್ಥಿಸಿದಾಗ ಅವನ ಪ್ರಾರ್ಥನೆಯನ್ನು ಆಲಿಸುತ್ತೇನೆಂದೂ ಅದಕ್ಕೆ ಉತ್ತರಿಸುತ್ತೇನೆಂದೂ ಅವರಿಗೆ ಹೇಳಿರಿ. ಆದುದರಿಂದ ಅವರು ನನ್ನ ಕರೆಗೆ ಓಗೊಡಲಿ ಮತ್ತು ನನ್ನ ಮೇಲೆ ವಿಶ್ವಾಸವಿಡಲಿ. ಅವರು ಸನ್ಮಾರ್ಗ ಪಡೆಯಲೂಬಹುದು.” (2:186)

ಅಲ್ಲಾಹನ ಈ ವಾಗ್ದಾನದ ಮೇಲೆ ವಿಶ್ವಾಸವಿರಿಸಿಕೊಂಡವರು ಅಲ್ಲಾಹೇತರರೊಂದಿಗೆ ಪ್ರಾರ್ಥಿಸುವುದಾದರೂ ಹೇಗೆ? ಇಚ್ಛಾಸಫಲತೆಗಾಗಿ ಜಾರ, ದರ್ಗಾಗಳಿಗೆ ತೆರಳುವವರು ತಾವು ಮಾಡುತ್ತಿರುವ ಈ ಕಾರ್ಯ ಎಲ್ಲಾ ಸತ್ಕ-ರ್ಮಗಳನ್ನು ಅಳಿಸಿ ಹಾಕಿ ನರಕದೆಡೆಗೆ ಕೊಂಡೊಯ್ಯುವ, ಅಲ್ಲಾಹನು ಕ್ಷಮಿಸಲಾರದ ಪಾಪವೆಂದು ತಿಳಿದು-ಕೊಳ್ಳಬೇಕು. ಅಲ್ಲಾಹು ಹೇಳುವುದನ್ನು ನೋಡಿರಿ.

﴿ إِنَّ ٱللَّهَ لَا يَغْفِرُ أَن يُشْرَكَ بِهِۦ وَيَغْفِرُ مَا دُونَ ذَٰلِكَ لِمَن يَشَآءُ ۚ
وَمَن يُشْرِكْ بِٱللَّهِ فَقَدِ ٱفْتَرَىٰٓ إِثْمًا عَظِيمًا ﴿٤٨﴾ ﴾

“ಅಲ್ಲಾಹನು ತನ್ನೊಂದಿಗೆ ಇತರರನ್ನು ಸಮಭಾಗಿಗಳನ್ನಾಗಿ ಮಾಡುವುದನ್ನು ಮಾತ್ರ ಎಂದೆಂದಿಗೂ ಕ್ಷಮಿಸು-ವುದಿಲ್ಲ. ಅದರ ಹೊರತು ಅವನು ಕ್ಷಮಿಸಲಿಚ್ಛಿಸುವ ಇತರ ಎಲ್ಲವನ್ನೂ ಕ್ಷಮಿಸುವನು. ಅಲ್ಲಾಹನೊಂದಿಗೆ ಇತರ ಯಾರನ್ನಾದರೂ ಸಹಭಾಗಿಯನ್ನಾಗಿ ಮಾಡಿದವನು ಅತಿದೊಡ್ಡ ಸುಳ್ಳನ್ನು ಸೃಷ್ಟಿಸಿದನು ಮತ್ತು ಅತ್ಯಂತ ಘೋರ ಪಾಪವೆಸಗಿದನು.” (4:48)

﴿ إِنَّ ٱللَّهَ لَا يَغْفِرُ أَن يُشْرَكَ بِهِۦ وَيَغْفِرُ مَا دُونَ ذَٰلِكَ لِمَن
يَشَآءُ ۚ وَمَن يُشْرِكْ بِٱللَّهِ فَقَدْ ضَلَّ ضَلَٰلًۢا بَعِيدًا ﴿١١٦﴾ ﴾

“ಅಲ್ಲಾಹನು ತನ್ನೊಂದಿಗೆ ಇತರರನ್ನು ಸಮಭಾಗಿಗಳನ್ನಾಗಿ ಮಾಡುವುದನ್ನು ಮಾತ್ರ ಎಂದೆಂದಿಗೂ ಕ್ಷಮಿಸು-ವುದಿಲ್ಲ. ಅದರ ಹೊರತು ಅವನು ಕ್ಷಮಿಸಲಿಚ್ಛಿಸುವ ಇತರ ಎಲ್ಲವನ್ನೂ ಕ್ಷಮಿಸುವನು. ಅಲ್ಲಾಹನೊಂದಿಗೆ ಇತರ ಯಾರನ್ನಾದರೂ ಸಹಭಾಗಿಯನ್ನಾಗಿ ಮಾಡಿದವನು ಪಥಭ್ರಷ್ಟತೆಯಲ್ಲಿ ಬಹುದೂರ ಸಾಗಿಬಿಟ್ಟನು.” (4:116)

ಅಲ್ಲಾಹೇತರರೊಂದಿಗೆ ಪ್ರಾರ್ಥಿಸುವುದನ್ನು ಇಸ್ಲಾಮ್ ಎಷ್ಟರಮಟ್ಟಿಗೆ ಅತ್ಯಂತ ಗಂಭೀರ ಪಾಪವೆಂದು ಪರಿಗ-ಣಿಸುತ್ತದೆ ಎನ್ನುವುದಕ್ಕೆ ಮೇಲಿನ ಕುರ್‌ಆನಿನ ವಚನಗಳು ಕೆಲವು ಉದಾಹರಣೆಗಳು ಮಾತ್ರ. ಪವಿತ್ರ ಕುರ್‌ಆ-ನಿನಲ್ಲಿ ಈ ಕುರಿತು ಎಚ್ಚರಿಸುವ ಇನ್ನೂ ಅನೇಕ ವಚನಗಳಿಗೆ. ಆದುದರಿಂದ ಮುಸ್ಲಿಮರಾದವರು ತಮ್ಮ ಎಲ್ಲಾ ಪ್ರಾರ್ಥನೆಗಳನ್ನು ಅಲ್ಲಾಹನಿಗೆ ಮಾತ್ರ ಸೀಮಿತಗೊಳಿಸಬೇಕು. ಯಾವುದೇ ಸೃಷ್ಟಿಗಳು ಪ್ರಾರ್ಥನೆಗೆ ಅರ್ಹರಲ್ಲ. ಅಲ್ಲಾಹನನ್ನು ಬಿಟ್ಟು ಯಾರೊಂದಿಗೂ ಪ್ರಾರ್ಥಿಸುವುದು ಸಲ್ಲ. ■

# ನಜ್ದ್‌ನಲ್ಲಿ ಶೈತಾನನ ಕೊಂಬು—ಒಂದು ಅವಲೋಕನ

ಈ ಹದೀಸ್‌ಗಳೆಲ್ಲವೂ ಸ್ಪಷ್ಟಪಡಿಸುತ್ತಿರುವುದೇನೆಂದರೆ ಅಲ್ಲಾಹನ ಸಂದೇಶವಾಹಕರಾದ ಮುಹಮ್ಮದ್(ﷺ) ರವರು ಸಮೃದ್ಧಿಗಾಗಿ ಪ್ರಾರ್ಥಿಸದೆ ಅಲ್ಲಿ ಶೈತಾನನ ಕೊಂಬು ಪ್ರತ್ಯಕ್ಷವಾಗುವುದೆಂದು ಹೇಳಿದ ನಜ್ದ್ ಅದು ಮದೀನಾ ಮುನವ್ವರದ ಪೂರ್ವ ಭಾಗದಲ್ಲಿರುವ ನಜ್ದ್ ಇರಾಕ್ ಆಗಿದೆ. ಆದರೆ ಮುಹಮ್ಮದ್ ಅಬ್ದುಲ್ ವಹ್ಹಾಬ್(ರ) ಜನಿಸಿದ ನಜ್ದ್ ಅದು ನಜ್ದ್ ಯಮನ್ ಅಥವಾ ಹಿಜಾಝ್ ಆಗಿದೆ.

ಬತಾಏ ಅಕಲೇ ಇನ್ಸಾನೀ ಕೋಯಿ ಹಲ್ ಇಸ್ ಮುಅಮ್ಮೇ ಕಾ

ನಝುರ್ ಕುಚ್ ಔರ್ ಕಹತಿ ಹೇ ಖಬರ್ ಕುಚ್ ಔರ್ ಕಹತಿ ಹೇ |

عَنْ ابْـنِ عُمَرَ قَـالَ ذَكَرَ النَّبِـيُّ صَلَّى اللَّـهُ عَلَيْهِ وَسَـلَّمَ: «اللَّهُمَّ بَـارِكْ لَنَا فِي شَـامِنَا. اللَّهُمَّ بَارِكْ لَنَا فِي يَمَنِنَا». قَالُوا: يَا رَسُـولَ اللَّـهِ! وَفِي نَجْدِنَا. قَالَ: «اللَّهُمَّ بَارِكْ لَنَا فِي شَـامِنَا. اللَّهُـمَّ بَارِكْ لَنَا فِي يَمَنِنَـا». قَالُوا: يَا رَسُـولَ اللَّهِ! وَفِـي نَجْدِنَا. فَأَظُنُّـهُ قَالَ فِي الثَّالِثَـةِ: «هُنَاكَ الـزَّلَازِلُ وَالْفِتَنُ. وَبِهَا يَطْلُعُ قَرْنُ الشَّـيْطَانِ».

ಅಬ್ದುಲ್ಲ ಬಿನ್ ಉಮರ್(ರ) [ಮರಣ ಹಿಜಿರ 73] ರಿಂದ ವರದಿ: ಪ್ರವಾದಿ(ﷺ) ಯವರು ಪ್ರಾರ್ಥಿಸಿದರು: "ಓ ಅಲ್ಲಾಹ್! ನಮಗಾಗಿ ನೀನು ನಮ್ಮ ಶಾಮ್ (ಸಿರಿಯ) ನ್ನು ಸಮೃದ್ಧಿಗೊಳಿಸು. ಓ ಅಲ್ಲಾಹನೇ! ನಮಗಾಗಿ ನೀನು ನಮ್ಮ ಯಮನನ್ನು ಸಮೃದ್ಧಿಗೊಳಿಸು." ಸಹಾಬಿಗಳು ಹೇಳಿದರು: "ಅಲ್ಲಾಹನ ಸಂದೇಶವಾಹಕರೇ! ನಮ್ಮ ನಜ್ದನ್ನು ಸಮೃದ್ಧಿಗೊಳಿಸುವಂತೆ ಪ್ರಾರ್ಥಿಸಿರಿ." ಪ್ರವಾದಿ(ﷺ) ಯವರು ಮತ್ತೊಮ್ಮೆ ಶಾಮ್ ಮತ್ತು ಯಮನನ್ನು ಸಮೃದ್ಧಿಗೊಳಿಸಲೆಂದು ಪ್ರಾರ್ಥಿಸಿದರು. ಸಹಾಬಿಗಳು ಮತ್ತೆ ನಜ್ದ್‌ನ ಸಮೃದ್ಧಿಗಾಗಿ ಪ್ರಾರ್ಥಿಸುವಂತೆ ಕೋರಿದರು. ವರದಿಗಾರರು ಹೇಳುವಂತೆ ಬಹುಶ ಮೂರನೇ ಸಲ ಸಹಾಬಿಗಳು ನಜ್ದ್‌ನಲ್ಲಿ ಸಮೃದ್ಧಿಗಾಗಿ ಪ್ರಾರ್ಥಿಸಿರೆಂದು ಕೋರಿದಾಗ ಪ್ರತಿಕ್ರಿಯಿಸುತ್ತಾ ಅಲ್ಲಾಹನ ಸಂದೇಶವಾಹಕರು(ﷺ) ಹೇಳಿದರು: "ಅಲ್ಲಿ ಭೂಕಂಪ ಮತ್ತು ಕ್ಷೋಭೆ ಉಂಟಾಗುವುದು ಮತ್ತು ಅಲ್ಲಿಂದಲೇ ಶೈತಾನನ ಕೊಂಬು ಪ್ರಕಟವಾಗುವುದು." (ಬುಖಾರಿ 2/105, ತಿರ್ಮುದಿ 2/232, ಮಿಶ್ಕಾತ್ 2/582)

## ದುರ್ವ್ಯಾಖ್ಯಾನ

ಬರೇಲ್ವಿಗಳು, ರಝಾಖಾನರ ಅಂಧಾನುಯಾಯಿಗಳು ಸಮಸ್ತದ ಸಮರ್ಥಕರು ಪ್ರಸ್ತುತ ಹದೀಸನ್ನು ಯಹೂದಿಗಳಂತೆ ದುರ್ವ್ಯಾಖ್ಯಾನ ಮಾಡುತ್ತಾ ಖ್ಯಾತ ಇಸ್ಲಾಮಿ ಪ್ರಬೋಧಕ ಮುಹಮ್ಮದ್ ಅಬ್ದುಲ್ ವಹಾಬ್ ಹಂಬಲೀ (ಮರಣ ಹಿಜಿರ 1206) ಮತ್ತು ಅವರ ಸಮರ್ಥಕರಿಗೆ ಈ ಹದೀಸ್ ಸಮನ್ವಯಗೊಳಿಸಲು ಪ್ರಯತ್ನಿಸುತ್ತಾರೆ. ಅವರು ಆರೋಪಿಸುವಂತೆ ನಜ್ದ್ ಎಂದರೆ ಸೌದಿ ಅರೇಬಿಯಾದ ನಜ್ದ್ ಮತ್ತು ಶೈತಾನನ ಕೊಂಬು ಎಂದರೆ ಮುಹಮ್ಮದ್ ಬಿನ್ ಅಬ್ದುಲ್ ವಹಾಬ್ ಆಗಿದ್ದಾರೆ ಎನ್ನುತ್ತಾ ಅವರ ವಿರುದ್ಧ ವಿಷ

ಉಗುಳುತ್ತಾರೆ. ಅವರು ಅಹ್ಲೆ ಹದೀಸಿನವರು ಮುಹಮ್ಮದ್ ಬಿನ್ ಅಬ್ದುಲ್ ವಹ್ಹಾಬರ ಅನುಯಾಯಿಗಳೆಂದು ಹೇಳುತ್ತಾ ಅವರ ಅಜ್ಞಾನವನ್ನು ಜಗಜ್ಜಾಹೀರುಗೊಳಿಸುತ್ತಾ ಇದ್ದಾರೆ.

ಇಲ್ಲಿ ಒಂದು ಜಿಜ್ಞಾಸೆಯ ನೆಲೆಯಲ್ಲಿ ಈ ಹದೀಸ್‌ನ ಬಗ್ಗೆ ಒಂದು ಅವಲೋಕನ ನಡೆಸೋಣ.

### ನಜ್ದ್‌ನ ಭಾಷಾರ್ಥ

ನಜ್ದ್ ಎನ್ನುವುದು ಮೂಲ ಪದವಾಗಿದ್ದು ಅದರ ಭಾಷಾರ್ಥ ಎತ್ತರದ ಪ್ರದೇಶ ಎಂದಾಗಿದೆ. ಪ್ರಸಿದ್ಧ ಅರಬಿ ಶಬ್ದಕೋಶಗಳಾದ ಅಲ್ ಮುಂಜಿದ್ ಪುಟ 995, ಮುಅ್‌ಜಮುಲ್ ಬುಲ್ದಾನ್ ಭಾಗ 19 ಪುಟ 265, ಮುಅ್‌ಜಮುಲ್ ವಸೀತ್ ಭಾಗ 2 ಪುಟ 909, ಅರ್‌ಾಇದ್ ಪುಟ 1483, ಮುಖ್ತಸರುಸ್ಸಿಹಾಹ್ ಪುಟ 646 ಮುಂತಾದವುಗಳಲ್ಲಿ ಈ ರೀತಿ ಇದೆ.

مَـا ارْتَفَـعَ مِـنَ الْأَرْضِ. وَالْجَمْـعُ نِجَـادٌ وَنُجُـودٌ وَأَنْجُـدٌ.

ಅರ್ಥಾತ್ ಎತ್ತರದಲ್ಲಿ ಗೋಚರಿಸುವ ಭೂಮಿಗೆ ನಜ್ದ್ ಎಂದು ಕರೆಯಲಾಗುತ್ತದೆ. ನಜ್ದ್‌ನ ಬಹುವಚನ ನಜಾದ್, ನುಜೂದ್, ಅನ್‌ಜುದ್ ಎಂದಾಗುತ್ತದೆ.

### ವ್ಯಾಖ್ಯಾನಕಾರರ ತೀರ್ಮಾನ

ವ್ಯಾಖ್ಯಾನಕಾರರ ತೀರ್ಪು ಕೂಡಾ ಇದುವೇ ಆಗಿದೆ. ಎತ್ತರದಲ್ಲಿ ಗೋಚರಿಸುವ ಪ್ರತಿಯೊಂದು ಭೂಪ್ರದೇಶವನ್ನೂ ನಜ್ದ್ ಎಂದು ಕರೆಯಲಾಗುತ್ತದೆ. ಈ ಕುರಿತು ಹಾಫಿಝ್ ಅಹ್ಮದ್ ಬಿನ್ ಅಲೀ ಅಲ್ ಮಅ್‌ರೂಫ್ ಇಬ್ನ್ ಹಜರ್ ಅಸ್ಖಲಾನಿ(ﷺ) ಮತ್ತು ಹನಫಿಗಳಲ್ಲಿ ಪ್ರಸಿದ್ಧರಾದ ಅಲ್ಲಾಹಮ ಕರ್ಮಾನಿ, ಅಲ್ಲಾಹಮ ಬದ್ರುದ್ದೀನ್ ಮಹ್ಮೂದ್ ಬಿನ್ ಅಹ್ಮದ್ ಅಲ್ ಐನೀ(ﷺ) ರವರು ತಮ್ಮ ತಮ್ಮ ಬುಖಾರಿ ವ್ಯಾಖ್ಯಾನ ಗ್ರಂಥಗಳಲ್ಲಿ ನಜ್ದ್‌ನ ಅರ್ಥವನ್ನು ಏಕ ಪ್ರಕಾರವಾಗಿ ವಿವರಿಸಿದ್ದು ಹೀಗೆ.

كُلُّ شَـيْءٍ ارْتَفَـعَ بِالنِّسْـبَةِ إِلَـى مَا يَلِيهِ يُسَـمَّى الْمُرْتَفِـعُ نَجْدًا وَالْمُنْخَفِضُ غَـوْرًا. وَأَصْلُ النَّجْدِ مَا ارْتَفَعَ مِنَ الْأَرْضِ. وَهُوَ خِلَافُ الْغَوْرِ.

ಈ ಅವಲೋಕನಗಳಿಂದ ವ್ಯಕ್ತವಾಗಿ ತಿಳಿದು ಬರುವುದೇನೆಂದರೆ ಅರಬರು ಪ್ರತಿಯೊಂದು ಎತ್ತರ ಪ್ರದೇಶದ ಭೂಮಿಯನ್ನು ನಜ್ದ್ ಎಂದೇ ಕರೆಯುತ್ತಾರೆ. ಈ ಹಿನ್ನೆಲೆಯಲ್ಲಿ ಅರಬ್ ರಾಷ್ಟ್ರಗಳಲ್ಲಿ ಬಹಳಷ್ಟು ನಜ್ದ್‌ಗಳಿವೆ.

### ಅರಬ್ ರಾಷ್ಟ್ರಗಳಲ್ಲಿ ಪ್ರಖ್ಯಾತವಿರುವ ನಜ್ದ್‌ಗಳು

ಅರಬ್ ರಾಷ್ಟ್ರಗಳಲ್ಲಿ ನಜ್ದ್ ಎಂಬ ಹೆಸರಿನಲ್ಲಿ ಅರಿಯಲ್ಪಡುವ ಪ್ರದೇಶಗಳ ಒಂದು ಸಂಕ್ಷಿಪ್ತ ಪಟ್ಟಿಯನ್ನು ಪುರಾತನ ಭೂಗೋಳ ಶಾಸ್ತ್ರ ಗ್ರಂಥ ಮುಅ್‌ಜಮುಲ್ ಬುಲ್ದಾನ್ ನ ಭಾಗ 19 ಪುಟ 265 ಮತ್ತು ಅರಬ್ ಭಾಷೆಗೆ ಸಂಬಂಧಿಸಿದ ಪ್ರಖ್ಯಾತ ಗ್ರಂಥ ತಾಜುಲ್ ಅರೂಸ್ ನ ವ್ಯಾಖ್ಯಾನ ಕಾಮೂಸ್ ಮುಂತಾದವುಗಳಿಂದ ಸಂಗ್ರಹಿಸಿ ಇಲ್ಲಿ ನೀಡಲಾಗಿದೆ.

١ – نَجْدُ الْمُوَز
٢ – نَجْدُ أَجَا
٣ – نَجْدُ بَرُق
٤ – نَجْدُ خَال
٥ – نَجْدُ الشَّرَى
٦ – نَجْدُ عُفْر
٧– نَجْدُ الْعُقَاب
٨– نَجْدُ كَبْكَب
٩– نَجْدُ مَرِيع
١٠ – نَجْدُ الْيَمَن
١١ – نَجْدُ الْعِرَاق
١٢ – نَجْدُ الْحِجَاز

### ಶೈತಾನನ ಕೊಂಬಿನ ನಜ್ದ್ ಯಾವುದು?

ಅಬ್ದುಲ್ಲ ಬಿನ್ ಉಮರ್(ﷺ) ಹೇಳುತ್ತಾರೆ: ಅಲ್ಲಾಹನ ಸಂದೇಶವಾಹಕರು(ﷺ) ಹಫ್ಸ(ﷺ) ರವರ ಮನೆಯ ಬಾಗಿಲಲ್ಲಿ ನಿಂತುಕೊಂಡು ಪೂರ್ವ ದಿಕ್ಕಿನೆಡೆಗೆ ಕೈ ತೋರಿಸುತ್ತಾ ಹೇಳಿದರು.

«الْفِتْنَةُ هَهُنَا مِنْ حَيْثُ يَطْلُعُ قَرْنُ الشَّـيْطَانِ» قَالَهَا مَرَّتَيْنِ أَوْ ثَلَاثًا.

"ಫಿತ್ನ ಫಸಾದ್ (ಕ್ಷೋಭೆ-ಅಶಾಂತಿ) ಈ ಕಡೆಯಿಂದ ಹರಡುವುದು. ಇಲ್ಲಿಂದಲೇ ಶೈತಾನನ ಕೊಂಬು ಪ್ರತ್ಯಕ್ಷವಾಗುವುದು." ಪ್ರವಾದಿ (ﷺ) ಯವರು ಈ ಮಾತನ್ನು ಎರಡು ಅಥವಾ ಮೂರು ಬಾರಿ ಪುನರಾವರ್ತಿಸಿದರು.

ಉಬೈದುಲ್ಲ ಬಿನ್ ಸಈದ್ ತನ್ನ ವರದಿಯಲ್ಲಿ "ಪ್ರವಾದಿ (ﷺ) ಯವರು ಈ ಮಾತನ್ನು ಆಯಿಶಾ(ﷺ) ರವರ ಮನೆಯ ಬಾಗಿಲಲ್ಲಿ ನಿಂತಿದ್ದರೆಂದು ಉಲ್ಲೇಖಿಸಿರುತ್ತಾರೆ." (ಬುಖಾರಿ 2/1050, ಮುಸ್ಲಿಂ 2/394)

ಈ ಹದೀಸ್‌ನಿಂದ ಸ್ಪಷ್ಟವಾಗುವುದೇನೆಂದರೆ ಅಲ್ಲಾಹನ ಸಂದೇಶವಾಹಕರು ಮದೀನದಲ್ಲಿ ಹಫ್ಸ ಅಥವಾ ಆಯಿಶ(ﷺ) ರವರ ಮನೆಯ ಬಾಗಿಲಲ್ಲಿ ನಿಂತು ಪೂರ್ವ ದಿಕ್ಕಿಗೆ ಕೈ ತೋರಿಸುತ್ತಾ ಫಿತ್ನ ಫಸಾದ್ ಈ ಕಡೆಯಿಂದ ಹರಡುವುದೆಂದೂ ಇಲ್ಲಿಂದಲೇ ಶೈತಾನನ ಕೊಂಬು ಪ್ರತ್ಯಕ್ಷವಾಗುವುದೆಂದೂ ಹೇಳಿರುವವತ್ತಾರೆ. ಅಂದರೆ ಶೈತಾನನ ಕೊಂಬು ಪ್ರತ್ಯಕ್ಷವಾಗುವುದು ಮದೀನ ಮುನವ್ವರದ ಪೂರ್ವದಿಕ್ಕಿನಲ್ಲಿ ಎನ್ನುವುದು ಇಲ್ಲಿ ಸ್ಪಷ್ಟವಾಯಿತು.

### ವ್ಯಾಖ್ಯಾನಕಾರರ ತೀರ್ಮಾನ

ಮದೀನ ಮುನವ್ವರದ ಪೂರ್ವ ದಿಕ್ಕಿನಲ್ಲಿ ನಜ್ದ್ (ಇರಾಕ್) ಇದೆ ಎನ್ನುವುದು ಸಂಶಯಕ್ಕೆ ಆಸ್ಪದವೇ ಇಲ್ಲದ ವಿಷಯವಾಗಿದೆ. ಪ್ರಖ್ಯಾತ ವಿದ್ವಾಂಸರಾದ ಹಾಫಿಝ್ ಇಬ್ನ್ ಹಜರ್ ಅಸ್ಖಲಾನಿ(ﷺ) (ಮರಣ ಹಿಜರಿ 852) ಮತ್ತು ಅಲ್ಲಾಮ ಐನಿ ಹನಫಿ(ﷺ) (ಮರಣ ಹಿಜರಿ 855) ಈ ಮೇಲಿನ ಹದೀಸನ್ನು ಉಲ್ಲೇಖಿಸಿಕೊಂಡು ಬರೆಯುತ್ತಾರೆ.

قَالَ الْخَطَّابِيُّ نَجْدٌ مِنْ جِهَةِ الْمَشْرِقِ وَمَنْ كَانَ بِالْمَدِينَةِ كَانَ نَجْدُهُ بَادِيَةَ الْعِرَاقِ وَنَوَاحِيهَا وَهِيَ مَشْرِقُ أَهْلِ الْمَدِينَةِ.

ಅರಬಿ ಭಾಷೆಯಲ್ಲಿ ವಿಶೇಷ ಪಾಂಡಿತ್ಯಾವನ್ನು ಹೊಂದಿದ್ದ, ಭೂಗೋಳಶಾಸ್ತ್ರ ಮತ್ತು ಹದೀಸ್‌ಗಳಲ್ಲಿ ಪಾರಂಗತರಾದ ಇಮಾಂ ಅಬೂ ಸುಲೈಮಾನ್ ಅಹ್ಮದ್ ಬಿನ್ ಮುಹಮ್ಮದ್ ಅಲ್ ಖತ್ತಾಬಿ (ﷺ) (ಮರಣ ಹಿಜರಿ 388) ಹೇಳುಂತೆ ಮದೀನ ಮುನವ್ವರದ ಪೂರ್ವ ದಿಕ್ಕಿನಲ್ಲಿರುವ ನಜ್ದ್ ಇರಾಕ್ ಆಗಿದೆ. ಅದುವೇ ಮದೀನದ ಪೂರ್ವದಿಕ್ಕು ಆಗಿರುವುದು. (ಫತ್ಹುಲ್ ಬಾರಿ ಭಾಗ 13 ಪುಟ 38, ಉಮ್ದತುಲ್ ಖಾರಿ ಭಾಗ 24 ಪುಟ 300)

### ಪ್ರವಾದಿ(ﷺ) ಯವರ ತೀರ್ಪು

ಸಾಲಿಮ್ ಬಿನ್ ಅಬ್ದುಲ್ಲ(ﷺ) (ಮರಣ ಹಿಜರಿ 102) ರವರು ಹೇಳುತ್ತಾರೆ.

يَا أَهْلَ الْعِرَاقِ مَا أَسْأَلَكُمْ عَنْ الصَّغِيرَةِ وَأَرْكَبَكُمْ لِلْكَبِيرَةِ سَمِعْتُ أَبِي عَبْدَ اللَّهِ بْنَ عُمَرَ يَقُولُ سَمِعْتُ رَسُولَ اللَّهِ صَلَّى اللَّهُ عَلَيْهِ وَسَلَّمَ يَقُولُ إِنَّ الْفِتْنَةَ تَجِيءُ مِنْ هَاهُنَا وَأَوْمَأَ بِيَدِهِ نَحْوَ الْمَشْرِقِ مِنْ حَيْثُ يَطْلُعُ قَرْنَا الشَّيْطَانِ وَأَنْتُمْ يَضْرِبُ بَعْضُكُمْ رِقَابَ بَعْضٍ.

"ಓ ಇರಾಕಿನವರೇ, ನೀವು ಸಣ್ಣ ಸಣ್ಣ ವಿಷಯಗಳನ್ನು ಗಂಭೀರವಾಗಿ ಪರಿಗಣಿಸಿ ಪ್ರಶ್ನೆಗಳ ಮೇಲೆ ಪ್ರಶ್ನೆಗಳನ್ನು ಕೇಳುತ್ತೀರಿ. ಆದರೆ ದೊಡ್ಡ ದೊಡ್ಡ ವಿಷಯಗಳನ್ನು ಸಂಪೂರ್ಣ ನಿರ್ಲಕ್ಷಿಸುತ್ತೀರಿ. ನಾನು ನನ್ನ ತಂದೆ ಅಬ್ದುಲ್ಲರಿಂದ ಒಂದು ಪ್ರವಾದಿವಚನವನ್ನು ಆಲಿಸಿದ್ದೇನೆ. ಪ್ರವಾದಿ(ﷺ) ಯವರು ಪೂರ್ವದಿಕ್ಕಿನೆಡೆಗೆ ಅರ್ಥಾತ್ ನಿಮ್ಮ ನಾಡು ಇರಾಕಿನ ಕಡೆಗೆ ಬೆರಳು ತೋರಿಸುತ್ತಾ ಹೇಳಿದರು. ಶೈತಾನನ ಕೊಂಬು ಅಲ್ಲೇ ಪ್ರತ್ಯಕ್ಷವಾಗುವುದು. ಅಲ್ಲಿಂದಲೇ ಕ್ಷೋಭೆ ಹರಡುವುದು. ನೀವು ಪರಸ್ಪರ ಕೊರಳು ಕೊಯ್ಯುತ್ತೀರಿ." (ಮುಸ್ಲಿಂ 2/394)

ಹಸನ್(ﷺ) ರಿಂದ ವರದಿ. ಪ್ರವಾದಿ(ﷺ) ಯವರು ಪ್ರಾರ್ಥಿಸಿದರು. "ಅಲ್ಲಾಹನನೇ! ನಮಗಾಗಿ ನಮ್ಮ ಮದೀನದಲ್ಲಿ ಸಮೃದ್ಧಿ ಉಂಟುಮಾಡು. ನಮ್ಮ ಶಾಮ್ (ಸಿರಿಯ) ನಲ್ಲಿ ಸಮೃದ್ಧಿ ಉಂಟು ಮಾಡು. ನಮ್ಮ ಯಮನ್‌ನಲ್ಲಿ ಸಮೃದ್ಧಿ ಉಂಟುಮಾಡು." ಅಷ್ಹರಲ್ಲಿ ಒಬ್ಬರು ಹೇಳಿದರು. "ಅಲ್ಲಾಹನ ಸಂದೇಶವಾಹಕರೇ, ನಮ್ಮ ಇರಾಕ್‌ನಲ್ಲೂ ಸಮೃದ್ಧಿಗಾಗಿ ಪ್ರಾರ್ಥಿಸಿರಿ. ಏಕೆಂದರೆ ಅಲ್ಲಿ ನಮ್ಮ ಆಹಾರವಿದೆ." ಪ್ರವಾದಿ(ﷺ) ಯವರು ಪ್ರತಿಕ್ರಿಯಿಸಲಿಲ್ಲ. ಆ ವ್ಯಕ್ತಿ ಎರಡನೇ ಸಲ ತನ್ನ ಬೇಡಿಕೆಯನ್ನು ಮುಂದಿಟ್ಟರೂ ಪ್ರವಾದಿ(ﷺ) ಯವರು ಮೌನ ವಹಿಸಿದರು. ಬಳಿಕ ಹೇಳಿದರು. "ಅಲ್ಲಿ (ಅಂದರೆ ಇರಾಕಿನಲ್ಲಿ) ಶೈತಾನನ ಕೊಂಬು ಪ್ರತ್ಯಕ್ಷವಾಗುವುದು. ಅಲ್ಲಿ ಭೂಕಂಪ ಮತ್ತು ಕ್ಷೋಭೆ ಉಂಟಾಗುವುದು." (ಕನ್‌ಝುಲ್ ಉಮ್ಮಾಲ್ ಫಿ ಸುನನಿಲ್ ಅಕ್ವಾಲಿ ವಲ್ ಅಫ್‌ಆಲ್ ಭಾಗ 14 ಪುಟ 172)

عَنِ ابْنِ عُمَـرَ رَضِيَ اللَّـهُ عَنْهُ قَالَ: قَالَ رَسُـولُ اللَّـهِ صَلَّى اللَّهُ عَلَيْهِ وَسَـلَّمَ: اللَّهُمَّ بَـارِكْ لَنَا فِي صَاعِنَـا وَمُدِّنَـا وَمَكَّتِنَـا وَمَدِينَتِنَا وَبَـارِكْ لَنَا فِي شَـامِنَا وَيَمَنِنَا. فَقَالَ رَجُلٌ فِي عِرَاقِنَا. قَالَ إِنَّ فِيهَا قَرْنَ الشَّـيْطَانِ وَتَهِيجُ الْفِتَنُ وَإِنَّ الْجَفَاءَ بِالْمَشْـرِقِ.

ಖ್ಯಾತ ಸಹಾಬಿ ಅಬ್ದುಲ್ಲ ಬಿನ್ ಉಮರ್(ﷺ) ವರದಿ ಮಾಡುತ್ತಾರೆ. ಪ್ರವಾದಿ(ﷺ) ಯವರು ಪ್ರಾರ್ಥಿಸಿದರು: "ಅಲ್ಲಾಹನೇ, ನಮಗಾಗಿ ನಮ್ಮ ಮಕ್ಕಾದಲ್ಲಿ ಸಮೃದ್ಧಿ ನೀಡು. ನಮ್ಮ ಮದೀನದಲ್ಲಿ ಸಮೃದ್ಧಿ ನೀಡು. ನಮ್ಮ ಸಾಅ್ ಮತ್ತು ಮುದ್ದ್‌ನಲ್ಲಿ ಸಮೃದ್ಧಿ ನೀಡು. ನಮಗಾಗಿ ನಮ್ಮ ಶಾಮ್ ಮತ್ತು ಯಮನ್‌ನಲ್ಲಿ ಸಮೃದ್ಧಿ ನೀಡು." ಅಷ್ಟರಲ್ಲಿ ಓರ್ವರು ಹೇಳಿದರು: "ನಮ್ಮ ಇರಾಕ್‌ನಲ್ಲೂ ಸಮೃದ್ಧಿ ಉಂಟು ಮಾಡುವಂತೆ ಪ್ರಾರ್ಥಿಸಿರಿ." ಆಗ ಪ್ರವಾದಿ (ﷺ) ಯವರು ಹೇಳಿದರು: "ನಿಶ್ಚಯವಾಗಿಯೂ ಅಲ್ಲಿ ಶೈತಾನನ ಕೊಂಬು ಪ್ರತ್ಯಕ್ಷವಾಗುವುದು, ಕ್ಷೋಭೆ ಹರಡುವುದು ಮತ್ತು ಅನ್ಯಾಯ-ಅಕ್ರಮ ಮಿತಿಮೀರುವುದು." (ಕನ್‌ಝುಲ್ ಉಮ್ಮಾಲ್ ಭಾಗ 14 ಪುಟ 168)

ಅಬ್ದುಲ್ಲ ಬಿನ್ ಉಮರ್(ﷺ) ಹೇಳುತ್ತಾರೆ: ಅಲ್ಲಾಹನ ಸಂದೇಶವಾಹಕರು(ﷺ) ಮುಂಜಾನೆ ನಮಾಝ್ ಮಾಡಿಸಿದ ನಂತರ ಮುಕ್ತದಿಗಳ ಕಡೆಗೆ ತಿರುಗಿ ಕುಳಿತು ದುಆ ಮಾಡಿದರು. "ಯಾ ಅಲ್ಲಾಹ್, ನೀನು ನಮಗಾಗಿ ನಮ್ಮ ಮದೀನದಲ್ಲಿ ಸಮೃದ್ಧಿ ಉಂಟುಮಾಡು. ನಮ್ಮ ಮುದ್ದ್ ಮತ್ತು ಸಾಅ್‌ನಲ್ಲಿ ಸಮೃದ್ಧಿ ಉಂಟುಮಾಡು. ಅಲ್ಲಾಹನೇ ಹರಮ್‌ನಲ್ಲಿ ಸಮೃದ್ಧಿ ಉಂಟುಮಾಡು. ನಮ್ಮ ಶಾಮ್‌ನಲ್ಲೂ ಯಮನ್‌ನಲ್ಲೂ ಸಮೃದ್ಧಿ ಉಂಟುಮಾಡು." ಅಷ್ಟರಲ್ಲಿ ಓರ್ವ ವ್ಯಕ್ತಿಯು "ಅಲ್ಲಾಹನ ಸಂದೇಶವಾಹಕರೇ, ಇರಾಕ್‌ನಲ್ಲಿ ಸಮೃದ್ಧಿಗಾಗಿ ಪ್ರಾರ್ಥಿಸಿ"ರೆಂದು ವಿನಂತಿಸಿಕೊಂಡರು. ಪ್ರವಾದಿ (ﷺ) ಯವರು ಪ್ರತಿಕ್ರಿಯಿಸಲಿಲ್ಲ. ಪ್ರವಾದಿ(ﷺ) ಯವರು ಮತ್ತೊಮ್ಮೆ ಮದೀನದಲ್ಲಿ ಸಮೃದ್ಧಿಗಾಗಿ, ಮುದ್ದ್ ಮತ್ತು ಸಾಅ್‌ನಲ್ಲಿ ಸಮೃದ್ಧಿಗಾಗಿ ಮತ್ತು ಯಮನ್ ಮತ್ತು ಶಾಮ್‌ನಲ್ಲಿ ಸಮೃದ್ಧಿಗಾಗಿ ಪ್ರಾರ್ಥಿಸಿದರು. ಆಗ ಮತ್ತೊಬ್ಬ ವ್ಯಕ್ತಿ ಇರಾಕಿನಲ್ಲಿ ಸಮೃದ್ಧಿಗಾಗಿ ಪ್ರಾರ್ಥಿಸುವಂತೆ ಬೇಡಿಕೊಂಡರು. ಆಗಲೂ ಪ್ರವಾದಿ(ﷺ) ಯವರು ಮೌನವಹಿಸಿದರು. ಬಳಿಕ ಮೂರನೇ ಸಲ ಕೂಡ ಪ್ರವಾದಿ(ﷺ) ಯವರು ಮದೀನ, ಮುದ್ದ್, ಸಾಅ್, ಹರಂ, ಶಾಮ್ ಮತ್ತು ಯಮನ್‌ನಲ್ಲಿ ಸಮೃದ್ಧಿಗಾಗಿ ಪ್ರಾರ್ಥಿಸಿದರು. ಈಗ ಮೂರನೇ ಸಲವೂ ಇರಾಕಿನಲ್ಲಿ ಸಮೃದ್ಧಿಗಾಗಿ ಪ್ರಾರ್ಥಿಸುವಂತೆ ಕೇಳಿಕೊಳ್ಳಲಾದಾಗ ಪ್ರವಾದಿ(ﷺ) ಯವರು ಹೇಳಿದರು. "ಅಲ್ಲಿ ಶೈತಾನನ ಕೊಂಬು ಪ್ರತ್ಯಕ್ಷವಾಗುವುದು ಮತ್ತು ಫಿತ್ನ ಫಸಾದ್ ಹರಡುವುದು."

## ಉಪಸಂಹಾರ

ಮೇಲೆ ಉಲ್ಲೇಖಿಸಲಾದ ಹದೀಸ್‌ಗಳೆಲ್ಲವೂ ಸ್ಪಷ್ಟಪಡಿಸುತ್ತಿರುವುದೇನೆಂದರೆ ಅಲ್ಲಾಹನ ಸಂದೇಶವಾಹಕರಾದ ಮುಹಮ್ಮದ್(ﷺ) ರವರು ಸಮೃದ್ಧಿಗಾಗಿ ಪ್ರಾರ್ಥಿಸದೆ ಅಲ್ಲಿ ಶೈತಾನನ ಕೊಂಬು ಪ್ರತ್ಯಕ್ಷವಾಗುವುದೆಂದು ಹೇಳಿದ ನಜ್ದ್ ಅದು ಮದೀನಾ ಮುನವ್ವರದ ಪೂರ್ವ ಭಾಗದಲ್ಲಿರುವ ನಜ್ದ್ ಇರಾಕ್ ಆಗಿದೆ. ಇನ್ನು ಮುಹಮ್ಮದ್ ಅಬ್ದುಲ್ ವಹ್ಹಾಬ್(ﷺ) ಜನಿಸಿದ ನಜ್ದ್ ಅದು ನಜ್ದ್ ಯಮನ್ ಅಥವಾ ಹಿಜಾಝ್ ಆಗಿದೆ.

## ಶೈತಾನನ ಕೊಂಬು ಪ್ರತ್ಯಕ್ಷವಾಗುವುದು ಎಂದರೇನು?

ಬರೇಲ್ವಿಗಳ ನೇತಾರ, ಹಕೀಮುಲ್ ಉಮ್ಮತ್, ಪ್ರಖ್ಯಾತ ಮುಫ್ತಿ, ಮೌಲ್ವಿ ಅಹ್ಮದ್ ಯಾರ್ ಖಾನ್ ಗುಜರಾತಿ ಶೈತಾನನ ಕೊಂಬು ಎನ್ನುವುದಕ್ಕೆ ಶೈತಾನರ ಒಂದು ಗುಂಪು ಎಂದು ಅರ್ಥ ಕೊಟ್ಟಿದ್ದಾರೆ. (ನೋಡಿರಿ. ಜಾಅಲ್ ಹಕ್ಕ್ ಭಾಗ 1 ಪುಟ 6)

ಪ್ರಖ್ಯಾತ ಹದೀಸ್ ವ್ಯಾಖ್ಯಾನಕಾರರಾದ ಹಾಫಿಝ್ ಇಬ್ನ್ ಹಜರ್ ಅಸ್ಕಲಾನಿ(ﷺ), ಅಲ್ಲಾಮ ಐನಿ ಹನಫಿ(ﷺ), ಅಲ್ಲಾಮ ಕರ್ಮಾನಿ (ﷺ) ರವರು ಕೂಡಾ ಶೈತಾನನ ಕೊಂಬು ಎನ್ನುವುದಕ್ಕೆ ಶೈತಾನೀ ಶಕ್ತಿ ಅಥವಾ ಗುಂಪು ಎಂದೇ ಅರ್ಥ ಕೊಟ್ಟಿದ್ದಾರೆ. ಮುಂದುವರಿಯುತ್ತಾ ಅವರು ಹೇಳುತ್ತಾರೆ. ಅರೇಬಿಕ್ ಭಾಷೆಯಲ್ಲಿ ಎಲ್ಲ ಅಪ್ರಿಯವಾದ ಕಾರ್ಯಗಳಿಗೂ ಶೈತಾನನ ಕೊಂಬು ಎಂದು ಹೇಳಲಾಗುತ್ತದೆ. (ಫತ್ಹುಲ್ ಬಾರಿ 13/47, ಉಮ್ದತುಲ್ ಖಾರಿ 24/199, ಕರ್ಮಾನಿ 24/168)

ಹನಫಿಗಳ ಶಿರೋಮಣಿ ಮುಲ್ಲಾ ಅಲೀ ಖಾರಿ ಹೇಳುತ್ತಾರೆ:

ಶೈತಾನನ ಕೊಂಬು ಎಂದರೆ ಅದರ ತಾತ್ಪರ್ಯ ಶೈತಾನರ ಒಂದು ಗುಂಪು ಎಂದೇ ಆಗಿದೆ. ಕಾಲಾನುಸಾರ ಕೆಡುಕಿಗೆ ಪ್ರೇರಣೆ ಮತ್ತು ಸಹಾಯ ನೀಡುತ್ತಾ ಕೆಡುಕನ್ನು ಹರಡುತ್ತಾ ಅಲ್ಲಿ ಅಶಾಂತಿ ಮತ್ತು ಕ್ಷೋಭೆಯನ್ನುಂಟು ಮಾಡುತ್ತದೆ. (ಅಲ್ ಮಿರ್ಕಾತ್ 11/456)

ಮೌಲಾನಾ ಸುಲೈಮಾನ್ ನದ್ವಿ (ಮರಣ ಹಿಜರಿ 1372) ಅಶಾಂತಿ ಮತ್ತು ಕ್ಷೋಭೆ ಪಶ್ಚಿಮದಿಂದಲೇ ಹುಟ್ಟುವುದು ಎಂದು ಹೇಳುತ್ತಾ ಈ ಕೆಳಗಿನಂತೆ ಅದನ್ನು ವಿವರಿಸುತ್ತಾರೆ.

ದೃಢೀಕೃತ ಹದೀಸ್‌ಗಳ ಉಲ್ಲೇಖಗಳು ಸಂಶಯಕ್ಕೆ ಆಸ್ಪದವೇ ಇಲ್ಲದಂತೆ ಇಸ್ಲಾಮಿನಲ್ಲಿ ಕ್ಷೋಭೆಯ ವಿಷ ಬೀಜವು ಪೂರ್ವದಲ್ಲೇ ಬಿತ್ತಲ್ಪಡುವುದು ಎನ್ನುವುದನ್ನು ಸ್ಪಷ್ಟಪಡಿಸುತ್ತದೆ. ಅವರು ತನ್ನ ಬೆರಳಿನಿಂದ ಇರಾಕಿನೆಡೆಗೆ ಸಂಜ್ಞೆ ಮಾಡುತ್ತಾ ಮತ್ತೆ ಮತ್ತೆ ಹೇಳಿದರು. ಎಲ್ಲಿಂದ ಸೂರ್ಯೋದಯವಾಗುವುದೋ ಅಲ್ಲಿಂದಲೇ ಶೈತಾನನ ಕೊಂಬು ಪ್ರತ್ಯಕ್ಷವಾಗುವುದು. ಅದಕ್ಕೆ ಧಾರಾಳ ನಿದರ್ಶನಗಳಿವೆ ನೋಡಿ.

- ಉಮರ್(ؓ) ರವರ ಹಂತಕ ಅಜ್ಮೀ ಆಗಿದ್ದ.
- ಉಸ್ಮಾನ್(ؓ) ರವರ ಕಾಲದಲ್ಲಿ ಕ್ಷೋಭೆ ಹುಟ್ಟಿಕೊಂಡಿದ್ದು ಇರಾಕ್‌ನಲ್ಲಾಗಿತ್ತು.
- ಜಮಲ್ ಯುದ್ಧವು ಅದೇ ಪ್ರದೇಶದಲ್ಲಿ ನಡೆದದ್ದು.
- ಅಲಿ(ؓ) ರನ್ನು ಹತ್ಯೆ ಮಾಡಲಾಗಿದ್ದು ಅಲ್ಲೇ ಆಗಿತ್ತು.
- ಅಮೀರ್ ಮುಆವಿಯ(ؓ) ಮತ್ತು ಅಲಿ(ؓ) ರವರ ನಡುವೆ ಯುದ್ಧ ನಡೆದಿದ್ದೂ ಅದೇ ಕಡೆ (ಸಿಫ್ಫೀನ್).
- ಇಸ್ಲಾಮಿನಲ್ಲಿ ಜಬರಿಯ, ಕದರಿಯ್ಯ ಮುಂತಾದ ಪಥಭ್ರಷ್ಟ ವಿಭಾಗ ಹುಟ್ಟಿಕೊಂಡದ್ದು ಅಲ್ಲೇ.
- ಇಸ್ಲಾಮಿನಲ್ಲಿ ಹಲವಾರು ವಿಭಾಗಗಳು, ಪಂಗಡಗಳು ಮತ್ತು ನೂತನ ಸಿದ್ಧಾಂತಗಳು ಉದ್ಭವವಾಗಿದ್ದು ಇಲ್ಲಿಂದಲೇ. ಇದರಿಂದ ಇಸ್ಲಾಮಿನ ಸರಳ ಸುಂದರ ರೂಪಕ್ಕೆ ಕಳಂಕ ಉಂಟಾಯಿತು.
- ಪ್ರವಾದಿ(ﷺ) ಯವರ ಕುಟುಂಬದ ಹೂಕುಡಿಯನ್ನು ಮೊಗ್ಗಿನಲ್ಲೇ ಚಿವುಟಿ ಹಾಕಲಾಗಿದ್ದು ಕೂಡಾ ಇಲ್ಲೇ.
- ಇಸ್ಲಾಮನ್ನು ಇಬ್ಭಾಗವಾಗಿ ಒಡೆದು ಹಾಕಿದ ಶಿಯಾಯಿಝಂ ಹುಟ್ಟಿದ್ದು ಕೂಡಾ ಇಲ್ಲೇ.
- ಹಜ್ಜಾಜರ ಅಕ್ರಮ ದಬ್ಬಾಳಿಕೆಗಳು ಇದೇ ಪ್ರದೇಶದಲ್ಲಿ ನಡೆದಿದ್ದು.
- ತುರ್ಕರು, ತರ್ತಾರಿಗಳು ಪ್ರಬಲರಾದ ಪರಿಣಾಮವಾಗಿ ಅರಬಿಗಳ ಆಡಳಿತವು ಪತನ ಕಂಡಿದ್ದು ಇಲ್ಲೇ.
- ನಿರ್ಣಾಯಕ ಯುದ್ಧದಲ್ಲಿ ಇಸ್ಲಾಮೀ ಸೇನೆಯೊಂದಿಗೆ ದ್ರೋಹದ ಪರಿಣಾಮ ಪ್ರಥಮವಾಗಿ ಗೋಚರಕ್ಕೆ ಬಂದಿದ್ದು ಇಲ್ಲಿ. ನಂತರ ಇದರ ಪ್ರಭಾವ ಇತರ ಕಡೆಗಳಲ್ಲಿ ಕಂಡುಬಂತು. (ಸೀರತುನ್ನಬಿ 3/698)

ಅಲ್ಲಾಮ ಶಿಬಲೀ ನುಅಮಾನಿ (ಇವರು ಅಖಂಡ ಭಾರತದ ಪ್ರಖ್ಯಾತ ಹನಫಿ ವಿದ್ವಾಂಸರೂ ಸೈಯ್ಯದ್ ಸುಲೈಮಾನ್ ನದ್ವಿಯವರ ಉಸ್ತಾದರೂ ಆಗಿದ್ದಾರೆ) ಬರೆಯುತ್ತಾರೆ.

ಪಥಭ್ರಷ್ಟರ ಮುಖ್ಯ ಕೇಂದ್ರ ಬಸ್ರಾ ಆಗಿತ್ತು. ಅದು ಇಮಾಂ ಅಬೂ ಹನೀಫರವರ ಊರಿಗೆ ಬಹಳ ನಿಕಟವೂ ಆಗಿತ್ತು. ವಾಸಿಲ್ ಬಿನ್ ಅತಾಅ್, ಅಮ್ರೂ ಬಿನ್ ಉಬೈದ್ (ಮುಅ್‌ತಝಿಲಿ ವಿಭಾಗದ ಸ್ಥಾಪಕರು) ಕೂಡಾ ಬಸ್ರಾದ ನಿವಾಸಿಗಳೇ ಆಗಿದ್ದರು ಮತ್ತು ಇಮಾಂ ಸಾಹೇಬರ ಸಮಕಾಲೀನರು.

ಜಹಮಿಯ ಎಂಬ ವಿಭಾಗದ ಮುಖ್ಯ ಜಹಮ್ ಬಿನ್ ಸಫ್ವಾನ್ ಕೂಡಾ ಆ ಕಾಲಘಟ್ಟದವನು. ಅವನು ಇರಾಕಿನವನು. ಈ ವಿಭಾಗಗಳ ಕುರಿತು ಇಮಾಮ್ ಹನೀಫ(ؒ) ಅಧ್ಯಯನ ಮಾಡಿ ಇವರಲ್ಲಿ ಬಹಳಷ್ಟು ತಪ್ಪುಧಾರಣೆಗಳಿದ್ದರೂ ಅದು ಸತ್ಯನಿಷೇಧ (ಕುಫ್ರ್)ದ ತನಕ ತಲುಪಿಲ್ಲ ಎಂಬ ಅಹ್ಲೆ ಕಿಬ್ಲಾ ಎಲ್ಲರೂ ಮೂಮಿನ್‌ಗಳಾಗಿದ್ದಾರೆಂದು ಫತ್ವಾ ನೀಡಿದ್ದಾಗಿದೆ. (ಸೀರತು-ನ್ನುಅಮಾನ್ ಪುಟ 152)

ಅವರು ಮುಂದುವರಿಯುತ್ತಾ ಬರೆಯುತ್ತಾರೆ. "ವಾಸ್ತವದಲ್ಲಿ ಹೆಚ್ಚಿನ ಕ್ಷೋಭೆ, ಗೊಂದಲ, ಗಲಾಟೆಗಳ ಕೇಂದ್ರ ಇರಾಕ್ ಆಗಿತ್ತು. ಅದರಲ್ಲೂ ಮುಖ್ಯವಾಗಿ ಕೂಫಾ." (ಸೀರತುನ್ನುಅಮಾನ್ ಪುಟ 71)

ಅಲ್ಲಾಮ ಬದ್ರುದ್ದೀನ್ ಅಬೂ ಮುಹಮ್ಮದ್ ಮಹ್ಮೂದ್ ಅಹ್ಮದುಲ್ ಐನೀ ಹನಫಿಯವರು ಶೈತಾನನ ಕೊಂಬು ಎಂಬ ಕುರಿತು ವಿಶ್ಲೇಷಣೆ ನಡೆಸುತ್ತಾ ಈ ರೀತಿ ಬರೆಯುತ್ತಾರೆ.

"ಪೂರ್ವದ ಕಡೆಗೆ ಪ್ರವಾದಿ(ﷺ) ಯವರು ಬೆರಳು ತೋರಿಸುತ್ತಾ ಶೈತಾನನ ಕೊಂಬು ಅಲ್ಲಿಂದ ಪ್ರತ್ಯಕ್ಷವಾಗುತ್ತದೆ ಎನ್ನುವಾಗ ನಜ್ದ್ ಇರಾಕಿನವರು ಇಸ್ಲಾಮಿನಲ್ಲಿ ಪ್ರವೇಶಿಸಿರಲಿಲ್ಲ. ಬಳಿಕ ಜಮಲ್ ಯುದ್ಧ ಮತ್ತು ಸಿಫ್ಫೀನ್ ಯುದ್ಧ ಸಂಭವಿಸಿದ್ದು ಇಲ್ಲೇ ಆಗಿತ್ತು. ಉಸ್ಮಾನ್(ؓ) ರವರ ವಿರುದ್ಧ ನಡೆದ ಪಿತೂರಿ ಮತ್ತು ಅವರ ಹತ್ಯೆಯ ಸಂಚಿನ ಕೇಂದ್ರ ಬಿಂದು ಕೂಡಾ ಇದುವೇ ಆಗಿತ್ತು. ಇಂತಹಾ ಘಟನೆಗಳ ಕುರಿತು ಮುನ್ಸೂಚನೆ ನೀಡುತ್ತಾ ಪ್ರವಾದಿ(ﷺ) ಯವರು ಎಚ್ಚರಿಸಿ-ದ್ದಾಗಿತ್ತು." (ಉಮ್ದತುಲ್ ಖಾರಿ 24/199) ■

# ಇಸ್ಲಾಮ್ ಪ್ರತಿಪಾದಿಸುವ ಆರ್ಥಿಕ ಸಿದ್ಧಾಂತ

ಭೂಮಿಯಲ್ಲಿ ಸ್ವರ್ಗವನ್ನು ಸ್ಥಾಪಿಸುತ್ತೇವೆಯೆಂದು ವಾದಿಸಿದ ರಷ್ಯಾ ಯಾವುದೇ ಬಾಹ್ಯ ಹಸ್ತಕ್ಷೇಪವೂ ಇಲ್ಲದೆ ಕುಸಿದುಬಿದ್ದು ತನ್ನ ಆರ್ಥಿಕ ಸಿದ್ಧಾಂತವನ್ನು ಎಸೆದುಬಿಟ್ಟಿರುವುದನ್ನು ನಾವು ನೋಡಿದೆವು. ಚೀನಾವೂ ಅದೇ ದಾರಿಯನ್ನು ಅನುಗಮಿಸಿದೆ. ಅಮೇರಿಕ ಮತ್ತಿತರ ಅಭಿವೃದ್ಧಿ ಹೊಂದಿದ ರಾಷ್ಟ್ರಗಳಲ್ಲಿ ಆರ್ಥಿಕ ಕುಸಿತ ಉಂಟಾಗಿದೆ. ಆದರೆ ಅವುಗಳು ಅರಬಿಗಳು ತಮ್ಮ ತಮ್ಮಲ್ಲೇ ಹೊಡೆದಾಡಿಕೊಳ್ಳುವಂತೆ ಮಾಡಿ ತಮ್ಮ ಶಸ್ತ್ರಾಸ್ತ್ರಗಳಿಗೆ ಮಾರುಕಟ್ಟೆ ಸೃಷ್ಟಿಸುವ ಮೂಲಕ ಆರ್ಥಿಕ ಕುಸಿತಕ್ಕೆ ತೇಪೆ ಹಚ್ಚಿ ತನ್ನ ಪ್ರಜೆಗಳನ್ನು ಸಮಾಧಾನಪಡಿಸುತ್ತಿದೆ. ಆದರೆ ಆ ಆಟ ಹೆಚ್ಚು ಕಾಲ ನಡೆಯದು. ಜಗತ್ತಿನಲ್ಲಿ ಇಸ್ಲಾಮೀ ಆರ್ಥಿಕ ವ್ಯವಸ್ಥೆ ಸ್ಥಾಯಿ ಪರಿಹಾರವಾಗಿ ಪ್ರತ್ಯಕ್ಷವಾಗುವ ಕಾಲ ದೂರವಿಲ್ಲ.

ಮನುಷ್ಯನ ಭೌತಿಕ ಜೀವನದಲ್ಲಿ ಸಂಪತ್ತಿನ ಪಾತ್ರ ಅದ್ವಿತೀಯವಾಗಿದೆ. ಸಂಪತ್ತನ್ನು ಹೇಗೆ ನಿರ್ವಹಿಸಿ ಭೌತಿಕ ಸುಖವನ್ನು ಪಡೆಯಬಹುದೆಂದು ಜನರಿಗೆ ತಿಳಿಸವ ಹಲವಾರು ಭೌತಿಕ ದರ್ಶನ, ಸಿದ್ಧಾಂತ ಮತ್ತು ಅಭಿಪ್ರಾಯಗಳು ಪ್ರಚಾರದಲ್ಲಿದೆ. ಇವುಗಳು ಮನುಷ್ಯನ ಚಿಂತನೆ ಮತ್ತು ನಡವಳಿಕೆಯ ಮೇಲೆ ತುಂಬಾ ಪ್ರಭಾವ ಬೀರಿವೆ. ಇವುಗಳ ಆಚೆಗೆ ಪರಲೋಕ ಕ್ಷೇಮಕ್ಕೆ ಒತ್ತು ನೀಡಿ ಇಹಲೋಕ ಜೀವನವನ್ನು ಸಂಪನ್ನಗೊಳಿಸುವ ಮತ್ತೊಂದು ದರ್ಶನ ನೆಲೆಗೊಂಡಿರುವುದರ ಕುರಿತು ಇತ್ತೀಚೆಗಿನ ತನಕ ಬಹುತೇಕ ಜನರಿಗೆ ಗೊತ್ತೇ ಇರಲಿಲ್ಲ.

ಆರ್ಥಿಕ ರಂಗವನ್ನು ಹೇಗೆ ಆಳಬೇಕೆಂದು ನಿರ್ದೇಶಿಸುವ ಪ್ಲೋಟೋ, ಅರಿಸ್ಟಾಟಲ್ ಮುಂತಾದ ತತ್ವಜ್ಞಾನಿಗಳ ಅಭಿಪ್ರಾಯಗಳು; ಆಡಂ ಸ್ಮಿತ್, ರಿಕಾಡೋನ, ಮಿಲ್ ಮುಂತಾದ ಕ್ಲಾಸಿಕಲ್ ಆರ್ಥಿಕ ಸಿದ್ಧಾಂತದ ವಕ್ತಾರರ ಚಿಂತನೆಗಳು ಕೃಷಿ ವಲಯಕ್ಕೆ ಅಗ್ರ ಪ್ರಾಶಸ್ತ್ಯ ನೀಡುವ ಕ್ವನ್ಸೋ, ಟರ್ಗೋ ಮುಂತಾದ ಫ್ರೆಂಚ್ ಚಿಂತಕರ ಕೊಡುಗೆಗಳು, ಮನ್, ಸೆರಾ, ವೋನ್, ಹಾರ್ನಿಕ್‌ರಂತಹ ಮೇಧಾವಿಗಳ ವಿದೇಶ ವ್ಯಾಪಾರಕ್ಕೆ ಪ್ರಾಮುಖ್ಯತೆ ನೀಡುವ ತತ್ವಚಿಂತನೆಗಳು; ನಂತರದ ಕಾಲಾವಧಿಯಲ್ಲಿ ಬಂದ ಕೇನ್ಸ್, ಕಾರ್ಲ್ ಮಾರ್ಕ್ಸ್ ಮೊದಲಾದವರ ಕ್ರಾಂತಿಕಾರಿ ಪಥಗಳು ಮಾತ್ರ ಬುದ್ಧಿಜೀವಿಗಳಿಗೆ ಪರಿಚಯವಿದೆ. ಇತ್ತೀಚೆಗಷ್ಟೇ ಕುರ್‌ಆನ್ ಪ್ರತಿಪಾದಿಸುವ ಆರ್ಥಿಕ ಪ್ರಕ್ರಿಯೆಗಳ ಕುರಿತು ಜನರ ಗಮನ ಸೆಳೆಯಲಾರಂಭಿಸಿದೆ.

ಇತರ ಆರ್ಥಿಕ ತತ್ವಗಳನ್ನು ಪ್ರಾಯೋಗಿಕವಾಗಿ ಜಾರಿಗೊಳಿಸುವ ಪ್ರಯತ್ನ ಆರಂಭವಾಗಿ ಹಲವು ಕಾಲ ಕಳೆದರೂ, ಜನರು ಇನ್ನೂ ಆರ್ಥಿಕ ದುರಂತಗಳಿಂದ ಮುಕ್ತವಾಗಿರದಿರುವುದರಿಂದ ಮುಂದಿನ ದಾರಿ ಯಾವುದು ಎಂಬ ಪುನರ್ಚಿಂತನೆಯು ಇಸ್ಲಾಮೀ ಸಿದ್ಧಾಂತದೆಡೆಗೆ ಗಮನಹರಿಸಲು ಎಡೆಮಾಡಿಕೊಟ್ಟಿತು. ಮುಸ್ಲಿಮರು ಕೂಡಾ ಈ ಸಿದ್ಧಾಂತವನ್ನು ಮರೆತು ಇತರ ವ್ಯವಸ್ಥೆಗಳ ತಾತ್ಕಾಲಿಕ ಪ್ರಭೆಯಲ್ಲಿ ಸಿಲುಕಿಕೊಂಡಿದ್ದಾರೆ. ಕುರ್‌ಆನ್‌ನಲ್ಲಿರುವ ಆರ್ಥಿಕ ನಿಲುವುಗಳನ್ನು ಸಮಾಹಾರಗೊಳಿಸಿ ಒಂದು ಆರ್ಥಿಕ ಕ್ರಮವಾಗಿ ಪ್ರಸ್ತುತಪಡಿಸಬಹುದಾಗಿದೆ.

ಧರ್ಮಗಳಲ್ಲಿ ಹಲವು ಆಧ್ಯಾತ್ಮಿಕತೆಗೆ ಮಾತ್ರ ಒತ್ತು ನೀಡುತ್ತದೆ. ಅವುಗಳಲ್ಲಿ ಎಲ್ಲಿಯೂ ಆರ್ಥಿಕ ವ್ಯವಹಾರದ ಕುರಿತು ವಿವರಣೆಗಳಿಲ್ಲ. ಆದುದರಿಂದ ಜನರಿಗೆ ಧಾರ್ಮಿಕ ಮೌಲ್ಯಗಳಲ್ಲಿ ಅಧಿಷ್ಠಿತಗೊಂಡಿರುವ ಒಂದು ಆರ್ಥಿಕ ವಿಧಾನವನ್ನು ಅಳವಡಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಇಸ್ಲಾಮ್ ಇದಕ್ಕೆ ಹೊರತಾಗಿದೆಯೆಂದು ಮುಸ್ಲಿಮ್ ಆಡಳಿತಗಾರರು ಕೂಡಾ ತಿಳಿಸಿಕೊಡಲಿಲ್ಲ. ಖುಲಫಾಉರ್ರಾಶಿದ್‌ರ

ಕಾಲ ಹಾಗೂ ನಂತರ ಉಮರ್ ಬಿನ್ ಅಬ್ದುಲ್ ಅಝೀಝ್‌ರ ಕಾಲದಲ್ಲಿ ಅಪ್ಪಟ ಇಸ್ಲಾಮೀ ಆರ್ಥಿಕ ವ್ಯವಸ್ಥೆ ಯಶಸ್ವಿಯಾಗಿ ಕಾರ್ಯವೆಸಗಿದ್ದ ಚರಿತ್ರೆಯು ಕೆಲವು ಗ್ರಂಥಗಳನ್ನು ನೋಡಿದರೆ ಮಾತ್ರ ಸಿಗುವ ವಾಸ್ತವಿಕತೆಯಾಗಿ ಮಾರ್ಪಟ್ಟಿತು.

ಮೊಟ್ಟಮೊದಲು ನಾವು ಸೃಷ್ಟಿಗಳ ಸಮಸ್ಯೆಗಳನ್ನು ಸೃಷ್ಟಿಕರ್ತನು ಅರಿಯುತ್ತಾನೆ ಎಂಬುದನ್ನು ಅಂಗೀಕರಿಸಬೇಕಾಗಿದೆ. ಸೃಷ್ಟಿಗಳಿಗೆ ಭೂತಕಾಲ ಮತ್ತು ವರ್ತಮಾನ ಕಾಲದ ಕಾರ್ಯಗಳು ಮಾತ್ರ ನಿಶ್ಚಿತವಿದೆ. ಅವುಗಳ ಆಧಾರದಲ್ಲಿ ಭವಿಷ್ಯದ ಕುರಿತು ರೂಪುರೇಶೆ ಮಾಡಿಕೊಳ್ಳಬಹುದು. ಆದರೆ ಅದು ಸರಿಯಾಗಿರಬೇಕೆಂದಿಲ್ಲ. ಆದುದರಿಂದ ನಾವು ನಮ್ಮ ಮಿತಿಯನ್ನು ಅರಿತುಕೊಂಡು ಸೃಷ್ಟಿಕರ್ತನನ್ನು ಅಂಗೀಕರಿಸಿ ಅವನ ವ್ಯವಸ್ಥೆಗಳನ್ನು ಕಾರ್ಯಗತಗೊಳಿಸಬೇಕು.

ಸೃಷ್ಟಿಕರ್ತನನ್ನು ಅಂಗೀಕರಿಸುವಾಗ ನಾವು ಆತನ ವಿಧಿ-ನಿಷೇಧಗಳನ್ನು ಅನುಸರಿಸಲು ಬದ್ಧರಾಗುತ್ತೇವೆ ಹಾಗೂ ಪರಲೋಕದಲ್ಲಿ ನಮ್ಮ ಕರ್ಮಗಳ ಲೆಕ್ಕ ಒಪ್ಪಿಸಬೇಕಾಗಿದೆ ಎನ್ನುವುದನ್ನೂ ಅಂಗೀಕರಿಸಬೇಕು. ಅದರ ಜತೆಗೆ ಪರಲೋಕ ಮೋಕ್ಷವು ಶಾಶ್ವತ ಮತ್ತು ಇಹಲೋಕವು ಕ್ಷಣಿಕವಾಗಿದೆಯೆಂದು ತಿಳಿದು ಇಹಲೋಕವು ಪರಲೋಕಕ್ಕೆ ಸಿದ್ಧತೆ ಮಾಡಿಕೊಳ್ಳುವ ಒಂದು ತಂಗುದಾಣ ಮಾತ್ರವಾಗಿದೆಯೆಂದು ನಾವು ಅಂಗೀಕರಿಸಬೇಕು. ಮೇಲೆ ವಿವರಿಸಿದ ಕಾರ್ಯಗಳು ಇಸ್ಲಾಮೀ ಆರ್ಥಿಕ ವ್ಯವಸ್ಥೆಯ ತಳಹದಿಯಾಗಿದೆ. ಅವುಗಳನ್ನು ಹೀಗೆ ಸಂಕ್ಷೇಪಿಸಬಹುದು:

1. ಭೂಮ್ಯಾಕಾಶಗಳಲ್ಲಿರುವ ಎಲ್ಲಾ ಕೊಡುಗೆಗಳ ಒಡೆತನದ ಹಕ್ಕು ಅಲ್ಲಾಹನಾಗಿದ್ದಾನೆ. ಮನುಷ್ಯನು ಈ ಕೊಡುಗೆಗಳ ಒಬ್ಬ ಫಲಾನುಭವಿ (trustee) ಮಾತ್ರ.

﴿لِّلَّهِ مَا فِي السَّمَاوَاتِ وَمَا فِي الْأَرْضِ﴾

“ಭೂಮ್ಯಾಕಾಶಗಳಲ್ಲಿರುವುದೆಲ್ಲವೂ ಅಲ್ಲಾಹನದ್ದಾಗಿದೆ.” (2:284)

﴿إِنَّ الْأَرْضَ لِلَّهِ يُورِثُهَا
مَن يَشَاءُ مِنْ عِبَادِهِ﴾

“ಭೂಮಿ ಅಲ್ಲಾಹನದ್ದು. ಅವನು ತನ್ನ ದಾಸರಲ್ಲಿ ತನಗಿಷ್ಟ ಬಂದವರನ್ನು ಅದರ ಉತ್ತರಾಧಿಕಾರಿಗಳಾಗಿ ಮಾಡುತ್ತಾನೆ.” (7:128)

﴿وَسَخَّرَ لَكُم مَّا فِي السَّمَاوَاتِ وَمَا
فِي الْأَرْضِ جَمِيعًا مِّنْهُ﴾

“ಅವನು ಭೂಮಿ ಮತ್ತು ಆಕಾಶಗಳ ಸಕಲ ವಸ್ತುಗಳನ್ನು ನಿಮಗಾಗಿ ನಿಯಂತ್ರಿಸಿಕೊಟ್ಟವನು.” (45:13)

﴿وَهُوَ الَّذِي جَعَلَكُمْ خَلَائِفَ الْأَرْضِ
وَرَفَعَ بَعْضَكُمْ فَوْقَ بَعْضٍ دَرَجَاتٍ﴾

“ಅವನು ನಿಮ್ಮನ್ನು ಭೂಮಿಯಲ್ಲಿ ಉತ್ತರಾಧಿಕಾರಿಗಳನ್ನಾಗಿ ಮಾಡಿದನು. ನಿಮ್ಮಲ್ಲಿ ಕೆಲವರಿಗಿಂತ ಇನ್ನು ಕೆಲವರ ಪದವಿಯನ್ನು ಉನ್ನತಗೊಳಿಸಿದನು.” (ಕುರ್‌ಆನ್)

﴿أَلَمْ تَرَوْا أَنَّ اللَّهَ سَخَّرَ لَكُم مَّا فِي السَّمَاوَاتِ وَمَا فِي
الْأَرْضِ وَأَسْبَغَ عَلَيْكُمْ نِعَمَهُ ظَاهِرَةً وَبَاطِنَةً﴾

“ಅಲ್ಲಾಹನು ಆಕಾಶಗಳಲ್ಲೂ ಭೂಮಿಯಲ್ಲೂ ಇರುವ ಸಕಲ ವಸ್ತುಗಳನ್ನು ನಿಮಗೆ ಅಧೀನಗೊಳಿಸಿರುವುದನ್ನು ತನ್ನ ಪ್ರತ್ಯಕ್ಷ ಹಾಗೂ ರಹಸ್ಯ ಅನುಗ್ರಹಗಳನ್ನು ನಿಮಗೆ ಪೂರ್ತಿಗೊಳಿಸಿಕೊಟ್ಟಿರುವುದನ್ನು ನೀವು ನೋಡುತ್ತಿಲ್ಲವೇ” (31:20)

2. ಮನುಷ್ಯರು ಒಂದು ಜನಾಂಗ.

﴿كَانَ النَّاسُ أُمَّةً وَاحِدَةً﴾

“ಮನುಷ್ಯರು ಒಂದು ಸಮುದಾಯವಾಗಿದ್ದರು.”

﴿يَا أَيُّهَا النَّاسُ إِنَّا خَلَقْنَاكُم مِّن ذَكَرٍ وَأُنثَىٰ
وَجَعَلْنَاكُمْ شُعُوبًا وَقَبَائِلَ لِتَعَارَفُوا إِنَّ أَكْرَمَكُمْ
عِندَ اللَّهِ أَتْقَاكُمْ إِنَّ اللَّهَ عَلِيمٌ خَبِيرٌ ﴿١٣﴾﴾

"ಜನರೇ ನಾವು ನಿಮ್ಮನ್ನು ಒಬ್ಬ ಪುರುಷ ಮತ್ತು ಒಬ್ಬ ಸ್ತ್ರೀಯಿಂದ ಉಂಟುಮಾಡಿದೆವು. ತರುವಾಯ ನೀವು ಪರಸ್ಪರ ಪರಿಚಯಪಟ್ಟುಕೊಳ್ಳಲಿಕ್ಕಾಗಿ ನಿಮ್ಮನ್ನು ಜನಾಂಗಗಳನ್ನಾಗಿ ಗೋತ್ರಗಳನ್ನಾಗಿ ಮಾಡಿದೆವು. ನಿಮ್ಮ ಪೈಕಿ ಅತ್ಯಧಿಕ ಧರ್ಮ-ನಿಷ್ಠನೇ ವಾಸ್ತವದಲ್ಲಿ ಅಲ್ಲಾಹನ ಬಳಿ ಗೌರವಕ್ಕೆ ಪಾತ್ರನು. ನಿಶ್ಚ-ಯವಾಗಿಯೂ ಅಲ್ಲಾಹನು ಸರ್ವಜ್ಞನೂ ವಿವರಪೂರ್ಣನೂ ಆಗಿರುತ್ತಾನೆ." (49:13)

3. ಏಕತೆಯಲ್ಲಿ ಶ್ರೀಮಂತಿಕೆ ಇದೆ. ಭಿನ್ನತೆಯಲ್ಲಾದರೋ ವಿನಾಶ. ಆದರೆ ಧಿಕ್ಕಾರಿಯೂ ಅಹಂಕಾರಿಯೂ ಆದ ಮನುಷ್ಯರು ಅನೈಕ್ಯತೆಯನ್ನು ಬೆಳೆಸುತ್ತಾರೆ. ಪಕ್ಷಿ ಮತ್ತು ಜಾರುವಾರುಗಳು ಕೂಡಾ ಮನುಷ್ಯರಂತೆ ಸಮುದಾಯಗಳಾಗಿವೆ. ಅವುಗಳ ಸಂರಕ್ಷಣೆ ಮನುಷ್ಯರ ಹೊಣೆಗಾರಿಕೆಯಾಗಿದೆ.

﴿وَمَا مِن دَآبَّةٍ فِي ٱلْأَرْضِ وَلَا طَٰٓئِرٍ يَطِيرُ بِجَنَاحَيْهِ إِلَّآ أُمَمٌ أَمْثَالُكُم﴾

"ಭೂಮಿಯ ಮೇಲೆ ಚಲಿಸುವ ಪ್ರಾಣಿಗಳನ್ನೂ, ವಾಯುವಿನಲ್ಲಿ ರೆಕ್ಕೆಗಳಿಂದ ಹಾರಾಡುವ ಪಕ್ಷಿಗಳನ್ನೂ ನೋಡಿಕೊಳ್ಳಿರಿ. ಇವೆಲ್ಲವೂ ನಿಮ್ಮಂತೆಯೇ ಇರುವ ವರ್ಗಗಳು." (6:35)

﴿وَجَعَلْنَا لَكُمْ فِيهَا مَعَٰيِشَ وَمَن لَّسْتُمْ لَهُۥ بِرَٰزِقِينَ ﴿٢٠﴾﴾

"ಅದರಲ್ಲಿ (ಭೂಮಿ) ನಿಮಗಾಗಿಯೂ ನೀವು ಅನ್ನದಾತ-ರಲ್ಲದಂತಹ ಅನೇಕ ಸೃಷ್ಟಿಗಳಿಗೂ ಜೀವನ ಸಾಧನಗಳನ್ನು ಒದಗಿಸಿದೆವು." (15:20) ನೀವು ಅನ್ನದಾತರಲ್ಲದಂತಹ ಅನೇಕ ಸೃಷ್ಟಿಗಳ ಉದ್ದೇಶ ಪಕ್ಷಿ ಮೃಗಾದಿಗಳಾಗಿವೆ.

4. ಎಲ್ಲಾ ಆರ್ಥಿಕ ವ್ಯವಹಾರಗಳು ನ್ಯಾಯದಲ್ಲಿ ಅಧಿಷ್ಠಿತಗೊಂಡಿರಬೇಕು.

﴿۞ يَٰٓأَيُّهَا ٱلَّذِينَ ءَامَنُوا۟ كُونُوا۟ قَوَّٰمِينَ بِٱلْقِسْطِ شُهَدَآءَ لِلَّهِ وَلَوْ عَلَىٰٓ أَنفُسِكُمْ أَوِ ٱلْوَٰلِدَيْنِ وَٱلْأَقْرَبِينَ ۚ إِن يَكُنْ غَنِيًّا أَوْ فَقِيرًا فَٱللَّهُ أَوْلَىٰ بِهِمَا ۖ فَلَا تَتَّبِعُوا۟ ٱلْهَوَىٰٓ أَن تَعْدِلُوا۟ ۚ وَإِن تَلْوُۥٓا۟ أَوْ تُعْرِضُوا۟ فَإِنَّ ٱللَّهَ كَانَ بِمَا تَعْمَلُونَ خَبِيرًا ﴿١٣٥﴾﴾

"ಓ ಸತ್ಯವಿಶ್ವಾಸಿಗಳೇ, ನೀವು ನ್ಯಾಯದ ಧ್ವಜವಾಹಕರೂ, ಅಲ್ಲಾಹನಿಗಾಗಿ ಸಾಕ್ಷ್ಯ ವಹಿಸುವವರೂ ಆಗಿರಿ. ನಿಮ್ಮ ನ್ಯಾಯ ಮತ್ತು ಸಾಕ್ಷ್ಯವು ಸ್ವತಃ ನಿಮ್ಮ ಅಥವಾ ನಿಮ್ಮ ಮಾತಾಪಿತರ ಮತ್ತು ನಿಮ್ಮ ಸಂಬಂಧಿಕರ ವಿರುದ್ಧವಾಗಿದ್ದರೂ ಸರಿಯೇ. ಕಕ್ಷಿಯು ಧನಿಕನಿರಲಿ ಅಥವಾ ಬಡವನಿರಲಿ. ನಿಮಗಿಂತ ಹೆಚ್ಚಾಗಿ ಅಲ್ಲಾಹನು ಅವರ ಹಿತಚಿಂತಕನಾಗಿರುತ್ತಾನೆ. ಆದುದರಿಂದ ನಿಮ್ಮ ಚಿತ್ತಾಸಕ್ತಿಯ ಅನುಸರಣೆಯಲ್ಲಿ ನ್ಯಾ-ಯಪಾಲನೆಯಿಂದ ಸರಿಯಬೇಡಿರಿ. ನೀವು ಗೂಢಾರ್ಥದ ಮಾತುಗಳನ್ನಾಡಿದರೆ ಅಥವಾ ಸತ್ಯದಿಂದ ನುಣುಚಿಕೊಂಡರೆ, ನಿಶ್ಚಯವಾಗಿಯೂ ನೀವು ಮಾಡುತ್ತಿರುವ ಕರ್ಮಗಳ ಅರಿವು ಅಲ್ಲಾಹನಿಗಿದೆಯೆಂಬುದನ್ನು ಚೆನ್ನಾಗಿ ತಿಳಿದಿರಲಿ." (4:135)

5. ಶೋಷಣೆಯು ನಿಷಿದ್ಧವಾಗಿದೆ. ಉಭಯತ್ರರು ಒಪ್ಪಿಗೆಯಿಲ್ಲದೆ ವ್ಯವಹಾರ ನಡೆಸಬಾರದು. ಕುರ್‌ಆನ್ ಹೀಗೆನ್ನುತ್ತದೆ:

﴿يَٰٓأَيُّهَا ٱلَّذِينَ ءَامَنُوا۟ لَا تَأْكُلُوٓا۟ أَمْوَٰلَكُم بَيْنَكُم بِٱلْبَٰطِلِ إِلَّآ أَن تَكُونَ تِجَٰرَةً عَن تَرَاضٍ مِّنكُمْ ۚ وَلَا تَقْتُلُوٓا۟ أَنفُسَكُمْ ۚ إِنَّ ٱللَّهَ كَانَ بِكُمْ رَحِيمًا ﴿٢٩﴾﴾

"ಓ ಸತ್ಯವಿಶ್ವಾಸಿಗಳೇ, ನೀವು ಪರಸ್ಪರರ ಸಂಪತ್ತನ್ನು ಅನುಚಿತ ರೀತಿಯಿಂದ ಕಬಳಿಸಬೇಡಿರಿ. ಲೇವಾದೇವಿಗಳು ಪರಸ್ಪರ ಒಪ್ಪಿಗೆಯಿಂದಾಗಬೇಕು. ನಿಮ್ಮನ್ನು ನೀವೇ ವಧಿಸಿಕೊಳ್ಳಬೇ-ಡಿರಿ. ಅಲ್ಲಾಹನು ನಿಮ್ಮ ಮೇಲೆ ಕೃಪೆಯುಳ್ಳವನೆಂಬುದನ್ನು ಖಾತ್ರಿಯಾಗಿ ನಂಬಿರಿ." (4:29)

ಶೋಷಣೆ ಕಾರ್ಮಿಕ ಅಥವಾ ಮಾಲಿಕನ ಕಡೆಯಿಂದಾಗಿರಲಿ, ಅವೆರಡೂ ನಿಷಿದ್ಧವೇ. ಒಬ್ಬನು ಮತ್ತೊಬ್ಬನ ದೌರ್ಬಲ್ಯವನ್ನು ಶೋಷಣೆ ಮಾಡುವಂತಿಲ್ಲ. ಇಂದು ಸಂಪೂರ್ಣ ಶಕ್ತಿಯ ಮೂಲಕ ದುರ್ಬಲರನ್ನು ಶೋಷಿಸುವುದು ಸಾಮಾನ್ಯವಾ-ಗಿದೆ. ಆದರೆ "ಪುಣ್ಯ ಮತ್ತು ದೇವಭಯದ ಕಾರ್ಯಗಳಲ್ಲಿ

ಎಲ್ಲರ ಜೊತೆ ಸಹಕರಿಸಿರಿ ಮತ್ತು ಪಾಪ ಹಾಗೂ ಅತಿರೇಕ ಕಾರ್ಯಗಳಲ್ಲಿ ಯಾರೊಂದಿಗೂ ಸಹಕರಿಸಬೇಡಿರಿ” (5:2) ಎಂದು ಕುರ್‌ಆನ್ ಕಲಿಸುತ್ತದೆ.

6. ಹಣವು ಒಂದೆಡೆ ಕೇಂದ್ರೀಕರಿಸಲ್ಪಡಬಾರದು. ಅಲ್ಲಾಹನು ಹೇಳುತ್ತಾನೆ:

﴿ وَيُمْدِدْكُم بِأَمْوَٰلٍ وَبَنِينَ ﴾

“ನಿಮಗೆ ಸೊತ್ತು ಸಂತಾನಗಳನ್ನು ದಯಪಾಲಿಸುವವನು.” (71:12)

﴿ٱلْمَالُ وَٱلْبَنُونَ زِينَةُ ٱلْحَيَوٰةِ ٱلدُّنْيَا ﴾

“ಸೊತ್ತು ಸಂತಾನಗಳು ಐಹಿಕ ಜೀವನದ ಅಲಂಕಾರಗಳಾಗಿವೆ.” (18:46)

ಅದೇ ಸಂದರ್ಭ “ನಿಮ್ಮ ಸೊತ್ತು ಮತ್ತು ಸಂತಾನಗಳು ಒಂದು ಪರೀಕ್ಷೆ ಮಾತ್ರವಾಗಿದೆ.” (64:15) ಎಂದು ಕುರ್‌ಆನ್ ಎಚ್ಚರಿಸುತ್ತದೆ. ಸಂಪತ್ತನ್ನು ಖರ್ಚು ಮಾಡದೆ ಕೂಡಿಡುವುದನ್ನು ಅಲ್ಲಾಹನು ಆಕ್ಷೇಪಿಸುತ್ತಾನೆ.

﴿ ۞ يَٰٓأَيُّهَا ٱلَّذِينَ ءَامَنُوٓا۟ إِنَّ كَثِيرًا
مِّنَ ٱلْأَحْبَارِ وَٱلرُّهْبَانِ لَيَأْكُلُونَ
أَمْوَٰلَ ٱلنَّاسِ بِٱلْبَٰطِلِ وَيَصُدُّونَ
عَن سَبِيلِ ٱللَّهِ ۗ وَٱلَّذِينَ يَكْنِزُونَ
ٱلذَّهَبَ وَٱلْفِضَّةَ وَلَا يُنفِقُونَهَا فِى سَبِيلِ
ٱللَّهِ فَبَشِّرْهُم بِعَذَابٍ أَلِيمٍ ﴿٣٤﴾ ﴾

“ಓ ಸತ್ಯವಿಶ್ವಾಸಿಗಳೇ, ಗ್ರಂಥದವರ ಅಧಿಕಾಂಶ ವಿದ್ವಾಂಸರೂ ಸಂತರೂ ಜನರ ಸಂಪತ್ತನ್ನು ಅನುಚಿತ ವಿಧಾನಗಳಿಂದ ಕಬಳಿಸುತ್ತಾರೆ ಮತ್ತು ಅವರನ್ನು ಅಲ್ಲಾಹನ ಮಾರ್ಗದಿಂದ ತಡೆಯುತ್ತಾರೆ. ಚಿನ್ನವನ್ನೂ ಬೆಳ್ಳಿಯನ್ನೂ ಸಂಗ್ರಹಿಸಿಟ್ಟು ಅವುಗಳನ್ನು ದೇವಮಾರ್ಗದಲ್ಲಿ ಖರ್ಚು ಮಾಡದವರಿಗೆ ವೇದನಾಯುಕ್ತ ಯಾತನೆಯ ಸುವಾರ್ತೆ ಕೊಡಿರಿ.” (9:34)

ಈ ನಿಷೇಧವು ಸಮಾಜದ ನಾಯಕರಿಗೆ ಮಾತ್ರ ಸೀಮಿತವಾಗಿರದೆ, ಎಲ್ಲರಿಗೂ ಅನ್ವಯವಾಗುತ್ತದೆ.

﴿وَيْلٌ لِّكُلِّ هُمَزَةٍ لُّمَزَةٍ ﴿١﴾ ٱلَّذِى
جَمَعَ مَالًا وَعَدَّدَهُۥ ﴿٢﴾ يَحْسَبُ أَنَّ مَالَهُۥٓ
أَخْلَدَهُۥ ﴿٣﴾ كَلَّا ۖ لَيُنۢبَذَنَّ فِى ٱلْحُطَمَةِ ﴿٤﴾
وَمَآ أَدْرَىٰكَ مَا ٱلْحُطَمَةُ ﴿٥﴾ نَارُ ٱللَّهِ ٱلْمُوقَدَةُ
﴿٦﴾ ٱلَّتِى تَطَّلِعُ عَلَى ٱلْأَفْـِٔدَةِ ﴿٧﴾ ﴾

“ಜನರನ್ನು ಮೂದಲಿಸುವ ಮತ್ತು ದೂಷಿಸುವ ಅಭ್ಯಾಸವಿರುವ ಪ್ರತಿಯೊಬ್ಬನಿಗೂ ವಿನಾಶವಿದೆ. ಅವನು ಸಂಪತ್ತನ್ನು ಸಂಗ್ರಹಿಸಿದನು ಮತ್ತು ಅದನ್ನು ಎಣಿಸಿ ಎಣಿಸಿ ಇಟ್ಟನು. ಅವನ ಸಂಪತ್ತು ಶಾಶ್ವತವಾಗಿ ಅವನ ಬಳಿಯಲ್ಲೇ ಇರುವುದೆಂದು ಅವನು ಭಾವಿಸುತ್ತಾನೆ. ಖಂಡಿತ ಇಲ್ಲ. ಅವನು ಪುಡಿಗಟ್ಟಿ ಬಿಡುವ ಸ್ಥಳಕ್ಕೆ ಎಸೆಯಲ್ಪಡುವವನು. ಪುಡಿಗಟ್ಟಿ ಬಿಡುವ ಆ ಸ್ಥಳ ಏನೆಂದು ನಿಮಗೇನು ಗೊತ್ತು? ಚೆನ್ನಾಗಿ ಧಗಧಗಿಸಲ್ಪಟ್ಟಿರುವ ಅಲ್ಲಾಹನ ಬೆಂಕಿ. ಅದು ಹೃದಯಗಳವರೆಗೂ ತಲುಪುವುದು.” (104:1-7)

7. ನ್ಯಾಯವಾದ ಮಾರ್ಗದಲ್ಲಿ ಸಂಪಾದಿಸುವುದು ಅನುವದನೀಯ. ಆದರೆ ಮಿತವಾದ ಅಗತ್ಯಗಳನ್ನು ಪೂರೈಸಿಕೊಂಡ ಬಳಿಕ ಉಳಿಯುವ ಮಿಗತೆ ಮೌಲ್ಯವನ್ನು ನ್ಯಾಯಯುತ ಮಾರ್ಗದಲ್ಲಿ ವೆಚ್ಚ ಮಾಡಬೇಕು. ಕುರ್‌ಆನ್ ನಮಾಝ್ ನಿರ್ವಹಿಸುವ ಆದೇಶದ ಜೊತೆಗೆ ವೆಚ್ಚ ಮಾಡಲೂ ಆಜ್ಞಾಪಿಸಿದೆ. ಅಂದರೆ ಆತ್ಮಶುದ್ಧಿ ಪೂರ್ತಿಯಾಗಬೇಕಾದರೆ ಸಂಪತ್ತನ್ನು ಬಡವರಿಗೆ ನೀಡಬೇಕು.

﴿لَن تَنَالُوا۟ ٱلْبِرَّ حَتَّىٰ تُنفِقُوا۟ مِمَّا تُحِبُّونَ ۚ وَمَا
تُنفِقُوا۟ مِن شَىْءٍ فَإِنَّ ٱللَّهَ بِهِۦ عَلِيمٌ ﴿٩٢﴾ ﴾

“ನೀವು ಇಷ್ಟಪಡುವುದರಿಂದ ನೀವು ವೆಚ್ಚಮಾಡುವ ತನಕ ಪುಣ್ಯವನ್ನು ಪಡೆಯಲಾರಿರಿ. ನೀವು ಯಾವ ವಸ್ತುವನ್ನು ವೆಚ್ಚಮಾಡಿದರೂ ಅಲ್ಲಾಹನು ಅದರ ಕುರಿತು ಚೆನ್ನಾಗಿ

ತಿಳಿಯುವವನೇ ಆಗಿರುತ್ತಾನೆ." (ಕುರ್‌ಆನ್)

﴿ ٱلَّذِينَ يُنفِقُونَ أَمْوَٰلَهُم بِٱلَّيْلِ
وَٱلنَّهَارِ سِرًّا وَعَلَانِيَةً فَلَهُمْ
أَجْرُهُمْ عِندَ رَبِّهِمْ وَلَا خَوْفٌ عَلَيْهِمْ
وَلَا هُمْ يَحْزَنُونَ ٢٧٤ ﴾

"ತಮ್ಮ ಸಂಪತ್ತನ್ನು ಆಹೋರಾತ್ರಿ ರಹಸ್ಯವಾಗಿಯೂ ಬಹಿರಂಗವಾಗಿಯೂ ಖರ್ಚು ಮಾಡುವವರ ಪ್ರತಿಫಲ ಅವರ ಪ್ರಭುವಿನ ಬಳಿ ಇದೆ. ಅವರಿಗೆ ಯಾವ ಭಯವೂ ವ್ಯಥೆಯೂ ಇರುವುದಿಲ್ಲ."

ಯಾವ ರೀತಿ ಖರ್ಚು ಮಾಡಬೇಕೆಂದೂ ಕುರ್‌ಆನ್ ಮಾರ್ಗದರ್ಶನ ನೀಡಿದೆ.

﴿ يَٰٓأَيُّهَا ٱلَّذِينَ ءَامَنُوٓا۟ أَنفِقُوا۟ مِن طَيِّبَٰتِ
مَا كَسَبْتُمْ وَمِمَّآ أَخْرَجْنَا لَكُم مِّنَ
ٱلْأَرْضِ ۖ وَلَا تَيَمَّمُوا۟ ٱلْخَبِيثَ مِنْهُ تُنفِقُونَ
وَلَسْتُم بِـَٔاخِذِيهِ إِلَّآ أَن تُغْمِضُوا۟ فِيهِ ۚ
وَٱعْلَمُوٓا۟ أَنَّ ٱللَّهَ غَنِىٌّ حَمِيدٌ ٢٦٧ ﴾

"ಓ ಸತ್ಯವಿಶ್ವಾಸಿಗಳೇ, ನೀವು ಸಂಪಾದಿಸಿದ ಸಂಪತ್ತಿನಿಂದ ಮತ್ತು ನಾವು ನಿಮಗಾಗಿ ಭೂಮಿಯಿಂದ ಉತ್ಪಾದಿಸಿದವು-ಗಳಿಂದ ಉತ್ತಮವಾದವುಗಳನ್ನು ದೇವಮಾರ್ಗದಲ್ಲಿ ಖರ್ಚು ಮಾಡಿರಿ. ಅವನ ಮಾರ್ಗದಲ್ಲಿ ಕೊಡಲು ಅತ್ಯಂತ ಕೆಟ್ಟ ವಸ್ತುವನ್ನು ಪ್ರತ್ಯೇಕಿಸಲು ಪ್ರಯತ್ನಿಸಬಾರದು. ಅದೇ ವಸ್ತುವನ್ನು ನಿಮಗೆ ಕೊಟ್ಟಾಗ ಅಲಕ್ಷಿಸುವ ಹೊರತು ನೀವೂ ಅದನ್ನು ಸ್ವೀಕರಿಸಲು ಇಷ್ಟಪಡಲಾರಿರಿ." (2:267)

ಏನನ್ನು ಖರ್ಚು ಮಾಡಬೇಕೆಂದೂ ಕುರ್‌ಆನ್ ಸೂಚಿಸಿದೆ.

﴿ وَيَسْـَٔلُونَكَ مَاذَا يُنفِقُونَ قُلِ ٱلْعَفْوَ ۗ ﴾

"...ನೀವು ದೇವಮಾರ್ಗದಲ್ಲಿ ಏನನ್ನು ಖರ್ಚು ಮಾಡಬೇಕೆಂದು ಕೇಳುತ್ತಾರೆ. ನಿಮ್ಮ ಅವಶ್ಯಕತೆಗಿಂತ ಮಿಕ್ಕಿರುವುದನ್ನು ಎಂದು ಹೇಳಿರಿ." (2:219)

ಆದರೆ ಇಸ್ಲಾಮ್ ದುರ್ವ್ಯಯ ಮತ್ತು ಏನನ್ನೂ ವೆಚ್ಚಮಾಡದೆ ಜಿಪುಣತೆ ತೋರಿಸುವುದನ್ನು ಅನುಮತಿಸುವುದಿಲ್ಲ.

﴿ وَلَا تَجْعَلْ يَدَكَ مَغْلُولَةً إِلَىٰ عُنُقِكَ وَلَا
تَبْسُطْهَا كُلَّ ٱلْبَسْطِ فَتَقْعُدَ مَلُومًا مَّحْسُورًا ٢٩ ﴾

"ನಿಮ್ಮ ಕೈಯನ್ನು ಕೊರಳಿಗೆ ಕಟ್ಟಿಕೊಂಡಿರಲೂ ಬೇಡಿರಿ ಮತ್ತು ನಿಂದ್ಯರೂ ನಿಸ್ಸಹಾಯಕರೂ ಆಗಿ ಬಿಡುವಂತೆ ಅದನ್ನು ಸಂಪೂರ್ಣವಾಗಿ ತೆರೆದಿಟ್ಟುಬಿಡಲೂ ಬೇಡಿರಿ." (17:29)

8. ಮಿಗತೆ ಮೌಲ್ಯದಲ್ಲಿ ಅಶಕ್ತರಿಗೆ ಹಕ್ಕಿದೆ:

﴿ وَفِىٓ أَمْوَٰلِهِمْ حَقٌّ لِّلسَّآئِلِ وَٱلْمَحْرُومِ ١٩ ﴾

"ಅವರ ಸೊತ್ತುಗಳಲ್ಲಿ ಬೇಡುವವರಿಗೂ (ಉಪಜೀವನ) ತಡೆಯಲ್ಪಟ್ಟವರಿಗೂ ಹಕ್ಕಿದೆ." (51:19)

ಸೊತ್ತು ಶ್ರೀಮಂತನಿಂದ ಬಡವನೆಡೆಗೆ ಹರಿದಾಗಲೇ ಸಮಾಜ-ಕಲ್ಯಾಣ ಸಾಧ್ಯವೆಂದರ್ಥ. ಆಶಕ್ತರ ಈ ಘೋಷಿತ ಹಕ್ಕನ್ನು ಅವರಿಗೆ ತಲುಪಿಸುವುದು ಒಂದು ಬಾಧ್ಯತೆಯಾಗಿದೆ. ಪ್ರವಾದಿ (ﷺ) ಹೇಳುತ್ತಾರೆ: "ಜನರಲ್ಲಿರುವ ಶ್ರೀಮಂತರಿಂದ ಪಡೆದು ಅವರಲ್ಲಿರುವ ಬಡವರಿಗೆ ವಿತರಿಸಬೇಕು." (ಬುಖಾರಿ) ಹೀಗಾದರೆ ಮಾತ್ರ ಸಂಪತ್ತು ಶುದ್ಧವಾಗುತ್ತದೆಯೆಂದು ಕುರ್‌ಆನ್ ಹೇಳಿದೆ.

﴿ خُذْ مِنْ أَمْوَٰلِهِمْ صَدَقَةً تُطَهِّرُهُمْ
وَتُزَكِّيهِم بِهَا وَصَلِّ عَلَيْهِمْ ۖ ﴾

"ನೀವು ಅವರ ಸಂಪತ್ತುಗಳಿಂದ ದಾನಧರ್ಮಗಳನ್ನು ಪಡೆದು ಅವರನ್ನು ಶುದ್ಧೀಕರಿಸಿರಿ." (9:103)

ಪ್ರವಾದಿ(ﷺ)ಯವರ ನಿಧನದ ನಂತರ ಝಕಾತ್ ನೀಡಲು

ಹಿಂದೇಟು ಹಾಕಿದವರೊಂದಿಗೆ ಅಬೂಬಕ್ಕರ್‌ರ(ﷺ)ವರು ಯುದ್ಧ ಘೋಷಿಸಿದ್ದರು. “ಅಲ್ಲಾಹನಾಣೆಗೂ ಸತ್ಯ, ಒಬ್ಬನು ಝಕಾತ್‌ನ ಪಾಲಾಗಿ ಪ್ರವಾದಿ(ﷺ)ಯವರಿಗೆ ನೀಡುತ್ತಿದ್ದ ಒಂದು ಆಡಿನ ಮರಿಯನ್ನಾದರೂ ನನಗೆ ನೀಡದಿದ್ದರೆ ನಾನು ಅದರ ಹೆಸರಲ್ಲಿ ಅವನೊಂದಿಗೆ ಯುದ್ಧ ಮಾಡುತ್ತೇನೆ.” (ಇಬ್ನ್ ಖುಝೈಮಃ ಸಂಪುಟ 4 ಪುಟ 7)

ಕೃಷಿ ಉತ್ಪನ್ನಗಳ ಝಕಾತ್ ಕೊಯ್ಲು ನಡೆದ ಕೂಡಲೇ ನೀಡಬೇಕು. ಚಿನ್ನ, ಬೆಳ್ಳಿ, ಕರೆನ್ಸಿ ನೋಟು, ನಾಣ್ಯ ಮುಂತಾದವುಗಳ ಝಕಾತ್ ಒಂದು ವರ್ಷ ಕಾಲಾವಧಿಯ ನಂತರವಾಗಿದೆ. ಜಾನುವಾರುಗಳ ಕಾರ್ಯದಲ್ಲಿ ಅವುಗಳ ಸಂಖ್ಯೆಯ ಪ್ರಕಾರ ಝಕಾತ್ ಕೊಡಬೇಕಾಗಿದೆ.

ಝಕಾತ್‌ನ ಹಕ್ಕುದಾರರು ಯಾರೆಂದು ಕುರ್‌ಆನ್ ಪಟ್ಟಿ ಮಾಡಿದೆ.

9. ಇತರರ ಅವಶ್ಯಕತೆಗಳಿಗೆ ಮೊದಲ ಪ್ರಾಶಸ್ತ್ಯ ನೀಡಬೇಕು:

﴿ وَٱلَّذِينَ تَبَوَّءُو ٱلدَّارَ وَٱلْإِيمَـٰنَ مِن قَبْلِهِمْ يُحِبُّونَ
مَنْ هَاجَرَ إِلَيْهِمْ وَلَا يَجِدُونَ فِى صُدُورِهِمْ
حَاجَةً مِّمَّآ أُوتُوا۟ وَيُؤْثِرُونَ عَلَىٰٓ أَنفُسِهِمْ
وَلَوْ كَانَ بِهِمْ خَصَاصَةٌ ۚ وَمَن يُوقَ شُحَّ نَفْسِهِۦ
فَأُو۟لَـٰٓئِكَ هُمُ ٱلْمُفْلِحُونَ ﴿٩﴾ ﴾

“ಅವರು ಸ್ವತಃ ತಮಗೆ ಅಗತ್ಯವಿದ್ದರೂ, ಇತರರಿಗೆ ಪ್ರಾಶಸ್ತ್ಯ ನೀಡುತ್ತಾರೆ. ವಾಸ್ತವದಲ್ಲಿ ಯಾರು ತಮ್ಮ ಮನಸ್ಸಿನ ಸಂಕುಚಿತತೆಯಿಂದ ರಕ್ಷಿಸಲ್ಪಟ್ಟರೋ ಅವರೇ ವಿಜಯಿಗಳು.” (59:9)

ಅಬೂ ಹುರೈರಾ(ﷺ) ಅವರಿಂದ ನಿವೇದನೆ: ಒಮ್ಮೆ ಪ್ರವಾದಿ (ﷺ)ಯವರು ಹೀಗೆಂದರು: ಅಲ್ಲಾಹನಾಣೆಗೂ ಸತ್ಯ! ಅವರು ವಿಶ್ವಾಸಿಗಳಾಗುವುದಿಲ್ಲ. ಅವರು ವಿಶ್ವಾಸಿಗಳಾಗುವುದಿಲ್ಲ.” ಆಗ ಕೇಳಲಾಯಿತು: “ಅಲ್ಲಾಹನ ಸಂದೇಶವಾಹಕರೇ ಯಾರವರು?” ಪ್ರವಾದಿ(ﷺ) ಉತ್ತರಿಸುತ್ತಾರೆ: “ಯಾರ ನೆರೆ-ಹೊರೆಯವರು ಅವನ ಕಿರುಕುಳದಿಂದ ಸುರಕ್ಷಿತವಾಗಿರುವು-ದಿಲ್ಲವೋ ಅವನು.” (ಬುಖಾರಿ)

ಮತ್ತೊಮ್ಮೆ ಪ್ರವಾದಿ(ﷺ) ಹೇಳಿದರು: “ನೆರೆಹೊರೆಯವನು ಹಸಿದಿರುವಾಗ ಹೊಟ್ಟೆ ತುಂಬಾ ಉಣ್ಣುವವನು ಸತ್ಯವಿ-ಶ್ವಾಸಿಯಲ್ಲ.” (ಬೈಹಕೀ)

10. ಅಭಿವೃದ್ಧಿ ಕಾರ್ಯಗಳು ಧರ್ಮದ ಭಾಗವಾಗಿದೆ.

﴿ يَـٰٓأَيُّهَا ٱلَّذِينَ ءَامَنُوٓا۟ إِذَا نُودِىَ لِلصَّلَوٰةِ مِن
يَوْمِ ٱلْجُمُعَةِ فَٱسْعَوْا۟ إِلَىٰ ذِكْرِ ٱللَّهِ وَذَرُوا۟ ٱلْبَيْعَ ۚ
ذَٰلِكُمْ خَيْرٌ لَّكُمْ إِن كُنتُمْ تَعْلَمُونَ ﴿٩﴾ ﴾

“ಸತ್ಯವಿಶ್ವಾಸಿಗಳೇ, ಶುಕ್ರವಾರ ದಿನ ನಮಾಝಿಗಾಗಿ ಕರೆಯಲಾದಾಗ ಅಲ್ಲಾಹನ ಸ್ಮರಣೆಯ ಕಡೆಗೆ ಧಾವಿಸಿರಿ ಮತ್ತು ಕ್ರಯ-ವಿಕ್ರಯಗಳನ್ನು ಬಿಟ್ಟುಬಿಡಿರಿ. ನೀವು ಅರಿತವರಾಗಿದ್ದರೆ ಅದು ನಿಮಗೆ ಅತ್ಯುತ್ತಮವಾಗಿದೆ.” (62:9)

﴿ فَإِذَا قُضِيَتِ ٱلصَّلَوٰةُ فَٱنتَشِرُوا۟ فِى
ٱلْأَرْضِ وَٱبْتَغُوا۟ مِن فَضْلِ ٱللَّهِ وَٱذْكُرُوا۟
ٱللَّهَ كَثِيرًا لَّعَلَّكُمْ تُفْلِحُونَ ﴿١٠﴾ ﴾

“ನಮಾಝ್ ಮುಗಿದ ಬಳಿಕ ಭೂಮಿಯ ಮೇಲೆ ಚದುರಿಬಿಡಿರಿ ಮತ್ತು ಅಲ್ಲಾಹನ ಅನುಗ್ರಹವನ್ನರಸಿರಿ. ಅಲ್ಲಾಹನನ್ನು ಅತ್ಯಧಿಕ ಸ್ಮರಿಸುತ್ತಲಿರಿ. ನಿಮಗೆ ಯಶಸ್ಸು ಪ್ರಾಪ್ತವಾ-ಗಲೂಬಹುದು.” (62:10)

ಸಂಪತ್ತನ್ನು ಜಾಗರೂಕತೆಯಿಂದ ತೊಡಗಿಸಿಕೊಳ್ಳಬೇಕೆಂದು ಕುರ್‌ಆನ್ ಸೂಚಿಸಿದೆ.

﴿ وَلَا تُؤْتُوا۟ ٱلسُّفَهَآءَ أَمْوَٰلَكُمُ ٱلَّتِى جَعَلَ
ٱللَّهُ لَكُمْ قِيَـٰمًا وَٱرْزُقُوهُمْ فِيهَا وَٱكْسُوهُمْ
وَقُولُوا۟ لَهُمْ قَوْلًا مَّعْرُوفًا ﴿٥﴾ ﴾

“ಅಲ್ಲಾಹನು ನಿಮಗೆ ಜೀವನ ಸಾಧನವನ್ನಾಗಿ ನಿಶ್ಚಯಿಸಿ-ರುವ ಸಂಪತ್ತನ್ನು ತಿಳಿಗೇಡಿಗಳ ವಶಕ್ಕೆ ಒಪ್ಪಿಸಬೇಡಿರಿ. ಆದರೆ ಅವರಿಗೆ ಉಣ್ಣಲಿಕ್ಕೂ, ಉಡಲಿಕ್ಕೂ ಕೊಡಿರಿ ಮತ್ತು ಅವರಿಗೆ

ಸದ್ಬೋಧನೆ ಮಾಡಿರಿ.” (4:5)

11. ಆರ್ಥಿಕ ವ್ಯವಸ್ಥೆಯಲ್ಲಿ ಸಂಘರ್ಷಕ್ಕೆ ಜಾಗವಿರಬಾರದು. ಅಲ್ಲಿ ಪರಸ್ಪರ ಪ್ರೀತಿ-ವಿಶ್ವಾಸವಿರಬೇಕು. ಅದರಿಂದ ಮಾತ್ರ ಪ್ರಗತಿ ಸಾಧ್ಯ.

﴿ يَٰٓأَيُّهَا ٱلَّذِينَ ءَامَنُواْ لَا تَأۡكُلُوٓاْ أَمۡوَٰلَكُم بَيۡنَكُم بِٱلۡبَٰطِلِ إِلَّآ أَن تَكُونَ تِجَٰرَةً عَن تَرَاضٖ مِّنكُمۡۚ ﴾

“ಓ ಸತ್ಯವಿಶ್ವಾಸಿಗಳೇ, ನೀವು ಪರಸ್ಪರರ ಸಂಪತ್ತನ್ನು ಅನುಚಿತ ರೀತಿಯಿಂದ ಕಬಳಿಸಬೇಡಿರಿ. ಲೇವಾದೇವಿಗಳು ಪರಸ್ಪರ ಒಪ್ಪಿಗೆಯಿಂದಾಗಬೇಕು.” (4:29)

ಪ್ರವಾದಿ(ﷺ)ಯವರು ತಮ್ಮ ವಿದಾಯ ಭಾಷಣದಲ್ಲಿ ಒಬ್ಬನ ಅಧೀನದಲ್ಲಿರುವ ಜನರನ್ನು ಅವನು ಹೇಗೆ ನೋಡಿಕೊಳ್ಳಬೇಕೆಂದು ಆದೇಶಿಸಿದ್ದರು. ನೀವು ಉಣ್ಣುವ ಆಹಾರವನ್ನೇ ಅವರಿಗೂ ನೀಡಬೇಕು. ನೀವು ತೊಡುವ ಬಟ್ಟೆಗಳನ್ನೇ ಅವರಿಗೂ ತೊಡಿಸಬೇಕು. ಅವರ ಸಾಮರ್ಥ್ಯಕ್ಕೆ ಮೀರಿದ ಕೆಲಸವನ್ನು ಮಾಡುವಂತೆ ಒತ್ತಡ ಹೇರಬಾರದು. ಅನಿವಾರ್ಯ ಸಂದರ್ಭದಲ್ಲಿ ಹಾಗೆ ಮಾಡಿದರೂ ಅವರ ಸಹಾಯಕ್ಕೆ ನಿಲ್ಲಬೇಕು.” (ಬುಖಾರಿ)

ಮತ್ತೊಂದು ಸಂದರ್ಭದಲ್ಲಿ ಪ್ರವಾದಿ(ﷺ) ಹೀಗೆ ಹೇಳಿದ್ದರು: “ಕಾರ್ಮಿಕನ ಬೆವರು ಆರುವುದಕ್ಕಿಂತ ಮೊದಲೇ ಅವನ ಕೂಲಿಯನ್ನು ಕೊಟ್ಟುಬಿಡಿರಿ.” (ಇಬ್ನ್ ಮಾಜ)

“ಒಬ್ಬನು ಕಾರ್ಮಿಕನನ್ನು ಕರೆದು ಕೆಲಸ ಮಾಡಿಸಿದ ಬಳಿಕ ಅವನಿಗೆ ಅರ್ಹ ಕೂಲಿ ನೀಡದಿದ್ದರೆ ನಾನು ಅವನ ವಿರುದ್ಧವಾಗಿ ವಾದಿಸುತ್ತೇನೆ.” ಎಂದು ಪ್ರವಾದಿ(ﷺ)ಯವರು ಹೇಳಿರುವರು. (ಬೈಹಕೀ)

ಆರ್ಥಿಕ ವ್ಯವಹಾರಗಳಿಗೆ ಸಂಬಂಧಪಟ್ಟ ಕುರ್‌ಆನ್ ವಚನ ಹಾಗೂ ಹದೀಸ್‌ಗಳನ್ನು ಮೇಲೆ ಉಲ್ಲೇಖಿಸಲಾಗಿದೆ. ಇವುಗಳು ಒಂದು ಆದರ್ಶ ಆರ್ಥಿಕ ವ್ಯವಸ್ಥೆಯ ವೈಶಿಷ್ಟ್ಯತೆಯಾಗಿದೆ. ಈ ದೈವಿಕ ನಿರ್ದೇಶನಗಳು ಜನರನ್ನು ಸ್ಥಾಯಿಯಾದ ಕಲ್ಯಾಣದೆಡೆಗೆ ಕೊಂಡೊಯ್ಯುತ್ತದೆ ಎನ್ನುವುದರಲ್ಲಿ ಸಂಶಯವಿಲ್ಲ. ಆರ್ಥಿಕ ವ್ಯವಸ್ಥೆಯ ಪ್ರಮುಖ ಘಟಕ ಮತ್ತು ಕ್ರಿಯಾಸಾಮರ್ಥ್ಯ ಅದರ ಹಸ್ತಾಂತರವಾಗಿದೆ. ಕ್ರಿಯಾ ಸಾಮರ್ಥ್ಯ ನಿಶ್ಚಲವಾದರೆ ಆರ್ಥಿಕ ಪ್ರಗತಿ ಸ್ಥಗಿತಗೊಳ್ಳುತ್ತದೆ. ಅದರ ಪರಿಣಾಮವಾಗಿ ಬಡತನ ಮತ್ತು ನಿರುದ್ಯೋಗ ಹೆಚ್ಚಾಗುತ್ತದೆ. ಇದು ಸಂಭವಿಸದಿರಲು ಇಸ್ಲಾಮ್ ಬಡ್ಡಿರಹಿತ ಸಾಲ ಹಾಗೂ ಝಕಾತನ್ನು ನಿಶ್ಚಯಿಸಿದೆ.

ಆಧುನಿಕ ವಾಣಿಜ್ಯ ಬ್ಯಾಂಕ್‌ಗಳ ಬಡ್ಡಿ ಇಸ್ಲಾಮ್ ನಿಷಿದ್ಧಗೊಳಿಸಿದ ಬಡ್ಡಿಯಲ್ಲಿ ಒಳಪಡುವುದಿಲ್ಲ ಮತ್ತು ಅದರಲ್ಲಿ ಶೋಷಣೆಯಿಲ್ಲ ಎಂಬ ಒಂದು ನೂತನವಾದವಿದೆ. ಅದು ಸರಿಯಲ್ಲ. ಬ್ಯಾಂಕ್‌ಗಳು ಬಡ್ಡಿಯ ಮೂಲಕ ಬಂಡವಾಳವನ್ನು ಆಕರ್ಷಿಸಿ ಅದನ್ನು ಬೇರೆಯವರಿಗೆ ಹ್ರಸ್ವಕಾಲದ ಸಾಲವಾಗಿ ನೀಡಿ ಅಭಿವೃದ್ಧಿಯನ್ನು ಸಾಧಿಸಲು ನೆರವಾಗುತ್ತದೆ ಎಂಬ ಧಾರಣೆಯಿದೆ. ವಾಸ್ತವದಲ್ಲಿ ಬ್ಯಾಂಕ್‌ನಿಂದ ಸಾಲ ಪಡೆದು ವ್ಯಾಪಾರ ಮಾಡಿದ ಅದೆಷ್ಟು ಮಂದಿ ಉದ್ಧಾರವಾಗಿದ್ದಾರೆಂದು ಹುಡುಕಿದರೆ ಹಲವೊಮ್ಮೆ ಉತ್ತರ ನಿಷೇಧಾತ್ಮಕವಾಗಿರುತ್ತದೆ. ಇನ್ನು ಒಬ್ಬನು ಬಡ್ಡಿಗೆ ಸಾಲ ಪಡೆದು ಅದನ್ನು ಉದ್ಯಮದಲ್ಲಿ ತೊಡಗಿಸಿದರೆ ಅದರಲ್ಲಿ ಉತ್ಪಾದನೆಯಾಗುವ ವಸ್ತುಗಳನ್ನು ಹೆಚ್ಚಿನ ಬೆಲೆಗೆ ಮಾರಾಟ ಮಾಡಿದರೆ ಮಾತ್ರ ಅವನಿಗೆ ಲಾಭ ಲಭಿಸುತ್ತದೆ. ಇದು ಬೆಲೆಯೇರಿಕೆಯ ವಾತಾವರಣವನ್ನು ಸೃಷ್ಟಿಸಿ ಜನರ, ಸೀಮಿತ ಆದಾಯವಿರುವವರ ಜೀವನವನ್ನು ಅಸಹನೀಯಗೊಳಿಸುತ್ತದೆ. ಆದರೆ ಬಡ್ಡಿರಹಿತ ವ್ಯವಸ್ಥೆಯನ್ನು ಸ್ವೀಕರಿಸಿದರೆ ಉತ್ಪಾದನೆ ವರ್ಧಿಸಿ ಬೆಲೆ ಕಡಿಮೆಯಾಗಿ ಎಲ್ಲರ ಕಲ್ಯಾಣ ಸಾಧಿತವಾಗುತ್ತದೆ.

ಉಳ್ಳವನ ಸೊತ್ತಿನಲ್ಲಿ ಇಲ್ಲದವನಿಗೆ ಹಕ್ಕಿದೆ ಎಂದು ಘೋಷಿಸುವ ಇಸ್ಲಾಮಿನ ಝಕಾತ್ ವ್ಯವಸ್ಥೆ ಅದಕ್ಕೇ ಮೀಸಲಾದ ಒಂದು ವೈಶಿಷ್ಟ್ಯತೆಯಾಗಿದೆ. ಝಕಾತ್‌ನ ಮೂಲಕ ಕ್ರಿಯಾಸಾಮರ್ಥ್ಯ ಉಳ್ಳವನಿಂದ ಇಲ್ಲದವನಿಗೆ ತಲುಪುತ್ತದೆ. ಇದು ಇಲ್ಲದವನ ಕೊಳ್ಳುವ ಶಕ್ತಿಯನ್ನು ವರ್ಧಿಸುತ್ತದೆ. ಕೊಳ್ಳುವ ಶಕ್ತಿ ವರ್ಧಿಸಿದರೆ ಉಳ್ಳವನ ಉತ್ಪನ್ನಗಳಿಗೆ ಮಾರುಕಟ್ಟೆಯೂ ವರ್ಧಿಸುತ್ತದೆ. ಇದು ಉಳ್ಳವನ ಆದಾಯದಲ್ಲಿ ಹೆಚ್ಚಳವನ್ನು ಉಂಟುಮಾಡುತ್ತದೆ. ವರಮಾನ ಮತ್ತು ಉದ್ಯೋಗವೂ ವರ್ಧಿಸುತ್ತದೆ. ಕೈಗಾರಿಕೆ ಕುಸಿತ ಉಂಟಾಗುವುದಿಲ್ಲ. ಝಕಾತನ್ನು ವ್ಯವಸ್ಥಿತವಾಗಿ ವಿತರಿಸಿದರೆ ಅದರ ಹಕ್ಕುದಾರರಿಗೆ ಆದಾಯ ಮಾರ್ಗವನ್ನು ಹುಡುಕಿ ತಮ್ಮ ಆರ್ಥಿಕ ಮಟ್ಟವನ್ನು ಉತ್ತಮಪಡಿಸಿಕೊಳ್ಳಲು ಸಾಧ್ಯವಾಗುತ್ತದೆ. ಇದು ಆದಾಯದ ಅಸಂತುಲಿತ ಅವಸ್ಥೆಯನ್ನು ಕಡಿಮೆ ಮಾಡಿ ಕ್ರಮೇಣ ಇಲ್ಲದಂತೆ ಮಾಡುತ್ತದೆ.

*31 ನೇ ಪುಟಕ್ಕೆ*

# ಆಹಾರ-ಪಾನೀಯಗಳ ಶಿಷ್ಟಾಚಾರಗಳು

ಶೈಖ್ ಮುಹಮ್ಮದ್ ಇಬ್ನ್ ಇಬ್ರಾಹೀಮ್ ಅತ್ತುವೈಜಿರೀ

## 1. ಶುದ್ಧ ಮತ್ತು ಧರ್ಮಸಮ್ಮತವಾದ ಆಹಾರವನ್ನು ಸೇವಿಸಬೇಕು

١ – قَالَ اللَّهُ تَعَالَى:

﴿ يَٰٓأَيُّهَا ٱلَّذِينَ ءَامَنُواْ كُلُواْ مِن طَيِّبَٰتِ مَا رَزَقۡنَٰكُمۡ وَٱشۡكُرُواْ لِلَّهِ إِن كُنتُمۡ إِيَّاهُ تَعۡبُدُونَ ﴿١٧٢﴾ ﴾

1. ಅಲ್ಲಾಹು ತಆಲಾ ಹೇಳುತ್ತಾನೆ: “ಓ ವಿಶ್ವಾಸವಿಟ್ಟವರೇ, ನಾವು ನಿಮಗೆ ಒದಗಿಸಿದ ಶುದ್ಧ ವಸ್ತುಗಳಿಂದ ತಿನ್ನಿರಿ ಮತ್ತು ಅಲ್ಲಾಹನಿಗೆ ಕೃತಜ್ಞತೆ ಸಲ್ಲಿಸಿರಿ. ನೀವು ಅವನನ್ನು ಮಾತ್ರ ಆರಾಧಿಸುವವರಾಗಿದ್ದರೆ.” [ಕುರ್‌ಆನ್ 2:172]

٢ – قَالَ اللَّهُ تَعَالَى:

﴿ ٱلَّذِينَ يَتَّبِعُونَ ٱلرَّسُولَ ٱلنَّبِيَّ ٱلۡأُمِّيَّ ٱلَّذِي يَجِدُونَهُۥ مَكۡتُوبًا عِندَهُمۡ فِي ٱلتَّوۡرَىٰةِ وَٱلۡإِنجِيلِ يَأۡمُرُهُم بِٱلۡمَعۡرُوفِ وَيَنۡهَىٰهُمۡ عَنِ ٱلۡمُنكَرِ وَيُحِلُّ لَهُمُ ٱلطَّيِّبَٰتِ وَيُحَرِّمُ عَلَيۡهِمُ ٱلۡخَبَٰٓئِثَ ﴾

2. ಅಲ್ಲಾಹು ತಆಲಾ ಹೇಳುತ್ತಾನೆ: “ಅಂದರೆ ಅವರು ತಮ್ಮ ತೌರಾತ್ ಮತ್ತು ಇಂಜೀಲ್‌ನಲ್ಲಿ ದಾಖಲಿಸಲ್ಪಟ್ಟಿದ್ದಾಗಿ ಕಾಣುವ ಅನಕ್ಷರಸ್ಥ ಪ್ರವಾದಿಯಾದ ರಸೂಲರನ್ನು ಅನುಸರಿಸುವವರು. ಅವರು ಅವರಿಗೆ ಸದಾಚಾರವನ್ನು ಆದೇಶಿಸುತ್ತಾರೆ ಮತ್ತು ದುರಾಚಾರವನ್ನು ವಿರೋಧಿಸುತ್ತಾರೆ; ಅವರಿಗೆ ಶುದ್ಧ ವಸ್ತುಗಳನ್ನು ಧರ್ಮಸಮ್ಮತಗೊಳಿಸುತ್ತಾರೆ ಮತ್ತು ಕೆಟ್ಟ ವಸ್ತುಗಳನ್ನು ನಿಷಿದ್ಧಗೊಳಿಸುತ್ತಾರೆ.” [ಕುರ್‌ಆನ್ 7:157]

## 2. ಹಿರಿಯರು ಮತ್ತು ಸಜ್ಜನರು ಇತರ ಜನರಿಗಿಂತ ಮೊದಲು ಆಹಾರ ಸೇವಿಸುವುದು ಸುನ್ನತ್ತಾಗಿದೆ

١ – عَنْ حُذَيْفَةَ رَضِيَ اللَّهُ عَنْهُ قَالَ: كُنَّا إِذَا حَضَرْنَا مَعَ النَّبِيِّ صَلَّى اللَّهُ عَلَيْهِ وَسَلَّمَ طَعَامًا لَمْ نَضَعْ أَيْدِيَنَا حَتَّى يَبْدَأَ رَسُولُ اللَّهِ صَلَّى اللَّهُ عَلَيْهِ وَسَلَّمَ فَيَضَعَ يَدَهُ. [أَخْرَجَهُ مُسْلِمٌ]

1. ಹುದೈಫಾ(ﷺ) ರಿಂದ ವರದಿ: ಅವರು ಹೇಳುತ್ತಾರೆ: “ನಾವು ಪ್ರವಾದಿ(ﷺ) ರವರೊಂದಿಗೆ ಆಹಾರ ಸೇವಿಸಲು ಕುಳಿತರೆ ಅಲ್ಲಾಹನ ರಸೂಲ್(ﷺ) ರವರು ತಮ್ಮ ಕೈಯನ್ನು ಹಾಕುವ ತನಕ ನಾವು ಕೈ ಹಾಕುತ್ತಿರಲಿಲ್ಲ.” [ಮುಸ್ಲಿಮ್ 2017]

### 3. ಆಹಾರ ಸೇವಿಸುವ ಮೊದಲು ಬಿಸ್ಮಿಲ್ಲಾಹ್ ಹೇಳುವುದು ಮತ್ತು ಸಮೀಪದಲ್ಲಿರುವುದನ್ನು ತಿನ್ನುವುದು

١ – عَنْ عُمَرَ بْنِ أَبِي سَلَمَةَ رَضِيَ اللَّهُ عَنْهُ قَالَ: كُنْتُ غُلَامًا فِي حَجْرِ رَسُولِ اللَّهِ صَلَّى اللَّهُ عَلَيْهِ وَسَلَّمَ وَكَانَتْ يَدِي تَطِيشُ فِي الصَّحْفَةِ، فَقَالَ لِي رَسُولُ اللَّهِ صَلَّى اللَّهُ عَلَيْهِ وَسَلَّمَ : يَا غُلَامُ سَمِّ اللَّهَ، وَكُلْ بِيَمِينِكَ، وَكُلْ مِمَّا يَلِيكَ. فَمَا زَالَتْ تِلْكَ طِعْمَتِي بَعْدُ. [مُتَّفَقٌ عَلَيْهِ]

1. ಉಮರ್ ಇಬ್ನ್ ಅಬೀ ಸಲಮಃ(ﷺ) ರಿಂದ ವರದಿ: ಅವರು ಹೇಳುತ್ತಾರೆ: ನಾನು ಅಲ್ಲಾಹನ ರಸೂಲ್(ﷺ) ರವರ ಮಡಿಲಲ್ಲಿರುವ ಒಂದು ಹುಡುಗನಾಗಿದ್ದೆ. ನನ್ನ ಕೈ ಬಟ್ಟಲಿನ ಎಲ್ಲ ಕಡೆ ಸುತ್ತುತ್ತಿತ್ತು. ಆಗ ಅಲ್ಲಾಹನ ರಸೂಲ್(ﷺ) ರವರು ನನ್ನೊಂದಿಗೆ ಹೇಳಿದರು: "ಓ ಹುಡುಗಾ, ಅಲ್ಲಾಹನ ಹೆಸರನ್ನು ಉಚ್ಛರಿಸು, ನಿನ್ನ ಬಲಗೈಯಿಂದ ತಿನ್ನು ಮತ್ತು ನಿನ್ನ ಸಮೀಪದಲ್ಲಿರುವುದನ್ನು ತಿನ್ನು." ಇದರ ನಂತರ ನಾನು ತಿನ್ನುವ ಶೈಲಿಯು ಅದೇ ಆಗಿತ್ತು." [ಅಲ್‌ಬುಖಾರೀ 5376, ಮುಸ್ಲಿಮ್ 2022; ಇದು ಅಲ್‌ಬುಖಾರೀಯ ವರದಿ.]

٢ – عَنِ ابْنِ مَسْعُودٍ رَضِيَ اللَّهُ عَنْهُ قَالَ: قَالَ رَسُولُ اللَّهِ صَلَّى اللَّهُ عَلَيْهِ وَسَلَّمَ : مَنْ نَسِيَ أَنْ يَذْكُرَ اللَّهَ فِي أَوَّلِ طَعَامِهِ فَلْيَقُلْ حِينَ يَذْكُرُ : بِاسْمِ اللَّهِ فِي أَوَّلِهِ وَآخِرِهِ، فَإِنَّهُ يَسْتَقْبِلُ طَعَامَهُ جَدِيدًا، وَيَمْنَعُ الْخَبِيثَ مَا كَانَ يُصِيبُهُ مِنْهُ. [أَخْرَجَهُ ابْنُ حِبَّانٍ وَابْنُ السُّنِّي]

2. ಇಬ್ನ್ ಮಸ್‌ಊದ್(ﷺ) ರಿಂದ ವರದಿ: ಅವರು ಹೇಳುತ್ತಾರೆ: ಅಲ್ಲಾಹನ ರಸೂಲ್(ﷺ) ರವರು ಹೇಳಿದರು: "ಯಾರಾದರೂ ಆಹಾರ ಸೇವನೆಯ ಆರಂಭದಲ್ಲಿ ಅಲ್ಲಾಹನ ಹೆಸರನ್ನು ಉಚ್ಛರಿ ಸಲು ಮರೆತರೆ, ಅದು ನೆನಪಾದಾಗ: 'ಬಿಸ್ಮಿಲ್ಲಾಹಿ ಫೀ ಅವ್ವಲಿಹೀ ವ ಆಖಿರಿಹೀ' ಎಂದು ಹೇಳಲಿ. ಏಕೆಂದರೆ ಅದು ಅವನು ಆಹಾರವನ್ನು ಹೊಸದಾಗಿ ಸೇವಿಸಿದಂತೆ ಮಾಡುತ್ತದೆ ಮತ್ತು ಆ ಆಹಾರದಿಂದ ಅವನಿಗೆ ಹಾನಿಯನ್ನುಂಟು ಮಾಡುವ ಹೊಲಸನ್ನು ತಡೆಗಟ್ಟುತ್ತದೆ." [ಇಬ್ನ್ ಹಿಬ್ಬಾನ್ 5213; ಇಬ್ನು ಸ್ಸುನ್ನೀ 461; ನೋಡಿ: ಅಸ್ಸಿಲ್ಸಿಲತು ಸ್ಸಹೀಹಃ 198]

### 4. ಆಹಾರ ಮತ್ತು ಪಾನೀಯ ಸೇವಿಸುವುದು ಬಲಗೈಯಿಂದಾಗಿರಬೇಕು

١ – عَنِ ابْنِ عُمَرَ رَضِيَ اللَّهُ عَنْهُ أَنَّ رَسُولَ اللَّهِ صَلَّى اللَّهُ عَلَيْهِ وَسَلَّمَ قَالَ: إِذَا أَكَلَ أَحَدُكُمْ فَلْيَأْكُلْ بِيَمِينِهِ، وَإِذَا شَرِبَ فَلْيَشْرَبْ بِيَمِينِهِ، فَإِنَّ الشَّيْطَانَ يَأْكُلُ بِشِمَالِهِ وَيَشْرَبُ بِشِمَالِهِ. [أَخْرَجَهُ مُسْلِمٌ]

1. ಇಬ್ನ್ ಉಮರ್(ﷺ) ರಿಂದ ವರದಿ: ಅಲ್ಲಾಹನ ರಸೂಲ್(ﷺ) ರವರು ಹೇಳಿದರು: "ನಿಮ್ಮಲ್ಲೊಬ್ಬರು ಆಹಾರ ಸೇವಿಸುವುದಾದರೆ ಅವನು ತನ್ನ ಬಲಗೈಯಿಂದ ಸೇವಿಸಲಿ ಮತ್ತು ಪಾನೀಯ ಕುಡಿಯುವುದಾದರೆ ತನ್ನ ಬಲಗೈಯಿಂದ ಕುಡಿಯಲಿ. ಏಕೆಂದರೆ ಖಂಡಿತವಾಗಿಯೂ ಶೈತಾನನು ಅವನ ಎಡಗೈಯಿಂದ ಆಹಾರ ಸೇವಿಸುತ್ತಾನೆ ಮತ್ತು ಅವನ ಎಡಗೈಯಿಂದ ಪಾನೀಯ ಕುಡಿಯುತ್ತಾನೆ." [ಮುಸ್ಲಿಮ್ 2020]

### 5. ಪಾನೀಯ ಸೇವಿಸುವಾಗ ಪಾತ್ರೆಯ ಹೊರಗೆ ಉಸಿರು ಬಿಡುವುದು

١ – عَنْ أَنَسٍ رَضِيَ اللَّهُ عَنْهُ قَالَ: كَانَ رَسُولُ اللَّهِ صَلَّى اللَّهُ عَلَيْهِ وَسَلَّمَ يَتَنَفَّسُ فِي الشَّرَابِ ثَلَاثًا، وَيَقُولُ: إِنَّهُ أَرْوَى، وَأَبْرَأُ، وَأَمْرَأُ. [مُتَّفَقٌ عَلَيْهِ]

1. ಅನಸ್(ﷺ) ರಿಂದ ವರದಿ: ಅವರು ಹೇಳುತ್ತಾರೆ: ಅಲ್ಲಾಹನ ರಸೂಲ್(ﷺ) ರವರು ಪಾನೀಯ ಸೇವಿಸುವಾಗ ಮೂರು ಬಾರಿ ಉಸಿರು ಬಿಡುತ್ತಿದ್ದರು. ಅವರು ಹೇಳುತ್ತಿದ್ದರು: "ದಾಹ

ನೀಗಲು, ದಾಹದ ನೋವು ನಿವಾರಣೆಯಾಗಲು ಮತ್ತು ಪಾನೀಯವು ಗಂಟಲಲ್ಲಿ ಸಲೀಸಾಗಿ ಜಾರಲು ಇದು ಅತ್ಯಂತ ಸೂಕ್ತವಾಗಿದೆ." [ಅಲ್‌ಬುಖಾರೀ 1631; ಮುಸ್ಲಿಮ್ 2028, ಇದು ಮುಸ್ಲಿಮ್‌ರ ಪದಗಳಾಗಿವೆ.]

### 6. ಪಾನೀಯ ಸೇವಿಸುವಾಗ ತಮ್ಮ ಬಲಭಾಗದಲ್ಲಿರುವವರಿಗೆ ನೀಡುವುದು ಸುನ್ನತ್ತಾಗಿದೆ

١ - عَـنْ أَنَسِ بْـنِ مَالِـكٍ رَضِـيَ اللَّهُ عَنْـهُ أَنَّ رَسُـولَ اللَّهِ صَلَّى اللَّـهُ عَلَيْهِ وَسَـلَّمَ أُتِـيَ بِلَبَنٍ قَدْ شِـيبَ بِمَاءٍ وَعَـنْ يَمِينِهِ أَعْرَابِيٌّ وَعَنْ شِـمَالِهِ أَبُو بَكْـرٍ، فَشَـرِبَ ثُمَّ أَعْطَـى الْأَعْرَابِـيَّ وَقَالَ: الْأَيْمَـنُ فَالْأَيْمَنُ.

1. ಅನಸ್ ಇಬ್ನ್ ಮಾಲಿಕ್(﵁) ರಿಂದ ವರದಿ: ಅಲ್ಲಾಹನ ರಸೂಲ್(ﷺ) ರವರಿಗೆ ನೀರು ಬೆರೆಸಿದ ಹಾಲನ್ನು ತಂದುಕೊಡಲಾಯಿತು. ಆಗ ಅವರ ಬಲಭಾಗದಲ್ಲಿ ಒಬ್ಬ ಗ್ರಾಮೀಣ ಅರಬಿಯಿದ್ದರು ಮತ್ತು ಅವರ ಎಡಭಾಗದಲ್ಲಿ ಅಬೂ ಬಕ್ರ್(﵁) ಇದ್ದರು. ಪ್ರವಾದಿ(ﷺ) ರವರು ಹಾಲನ್ನು ಸ್ವಲ್ಪ ಕುಡಿದು ಗ್ರಾಮೀಣ ಅರಬಿಗೆ ನೀಡುತ್ತಾ ಹೇಳಿದರು: "ಬಲಭಾಗದಲ್ಲಿರುವವರಿಗೆ, ನಂತರ ಅವರ ಬಲಭಾಗದಲ್ಲಿರುವವರಿಗೆ ನೀಡಬೇಕಾಗಿದೆ." [ಅಲ್‌ಬುಖಾರೀ 1631; ಮುಸ್ಲಿಮ್ 2028, ಇದು ಮುಸ್ಲಿಮ್‌ರ ಪದಗಳು.]

### 7. ಕುಳಿತುಕೊಂಡು ಕುಡಿಯುವುದು ಸುನ್ನತ್ತಾಗಿದೆ

١ - عَـنْ أَبِي سَـعِيدٍ الْخُـدْرِيِّ رَضِيَ اللَّـهُ عَنْهُ أَنَّ النَّبِـيَّ صَلَّـى اللَّـهُ عَلَيْهِ وَسَـلَّمَ زَجَـرَ عَنِ الشُّـرْبِ قَائِمًا.

1. ಅಬೂ ಸಈದ್ ಅಲ್‌ಖುದ್ರೀ(﵁) ರಿಂದ ವರದಿ: ಅವರು ಹೇಳುತ್ತಾರೆ: "ನಿಂತುಕೊಂಡು ಪಾನೀಯ ಸೇವಿಸುವುದನ್ನು ಪ್ರವಾದಿ(ﷺ) ರವರು ವಿರೋಧಿಸಿದ್ದಾರೆ." [ಮುಸ್ಲಿಮ್ 2025]

### 8. ನಿಂತುಕೊಂಡು ಕುಡಿಯುವುದಕ್ಕೆ ಅನುಮತಿಯಿದೆ

١ - عَنِ النَّـزَّالِ قَالَ: أَتَـى عَلِيٌّ رَضِيَ اللَّـهُ عَنْهُ عَلَـى بَابِ الرَّحَبَةِ فَشَـرِبَ قَائِمًا، فَقَالَ: إِنَّ نَاسًـا يَكْرَهُ أَحَدُهُمْ أَنْ يَشْـرَبَ وَهُوَ قَائِـمٌ، وَإِنِّي رَأَيْتُ النَّبِيَّ صَلَّى اللَّهُ عَلَيْهِ وَسَـلَّمَ فَعَـلَ كَمَا رَأَيْتُمُونِي فَعَلْـتُ. [أَخْرَجَهُ الْبُخَارِيُّ]

1. ನಝ್ಝಾಲ್(﵁) ರಿಂದ ವರದಿ: ಅವರು ಹೇಳುತ್ತಾರೆ: ಅಲೀ(﵁) ರವರು ರಹಬಃ ದ್ವಾರಕ್ಕೆ ಬಂದು ನಿಂತುಕೊಂಡು ಪಾನೀಯ ಸೇವಿಸಿದರು. ನಂತರ ಹೇಳಿದರು: ನಿಂತುಕೊಂಡು ಪಾನೀಯ ಸೇವಿಸುವುದನ್ನು ಜನರಲ್ಲಿ ಕೆಲವರು ಅಸಹ್ಯಪಡುತ್ತಾರೆ. ಆದರೆ ನಾನು ಈಗ ಮಾಡುತ್ತಿರುವುದನ್ನು ಪ್ರವಾದಿ(ﷺ) ರವರು ಮಾಡುತ್ತಿದ್ದುದಾಗಿ (ಅಂದರೆ ನಿಂತುಕೊಂಡು ಪಾನೀಯ ಸೇವಿಸುತ್ತಿರುವುದಾಗಿ) ನಾನು ಕಂಡಿದ್ದೇನೆ." [ಅಲ್‌ಬುಖಾರೀ 5615]

### 9. ಚಿನ್ನ ಮತ್ತು ಬೆಳ್ಳಿಯ ಪಾತ್ರೆಗಳಲ್ಲಿ ಆಹಾರ ಮತ್ತು ಪಾನೀಯಗಳನ್ನು ಸೇವಿಸಬಾರದು

١ - عَـنْ حُذَيْفَـةَ رَضِيَ اللَّـهُ عَنْهُ قَالَ: سَـمِعْتُ النَّبِيَّ صَلَّـى اللَّهُ عَلَيْهِ وَسَـلَّمَ يَقُولُ: لَا تَلْبَسُـوا الْحَرِيرَ وَلَا الدِّيبَاجَ، وَلَا تَشْـرَبُوا فِي آنِيَةِ الذَّهَبِ وَالْفِضَّـةِ، وَلَا تَأْكُلُوا فِي صِحَافِهَـا، فَإِنَّهَا لَهُمْ فِي الدُّنْيَا وَلَنَا فِـي الْآخِرَةِ.

1. ಹುದೈಫಾ(﵁) ರಿಂದ ವರದಿ: ಅವರು ಹೇಳುತ್ತಾರೆ: "ನೀವು ರೇಶ್ಮೆ ಮತ್ತು ಬ್ರೊಕೇಡು ಉಡುಪುಗಳನ್ನು ಧರಿಸಬಾರದು. ನೀವು ಚಿನ್ನ ಮತ್ತು ಬೆಳ್ಳಿಯ ಪಾತ್ರೆಗಳಲ್ಲಿ ಕುಡಿಯಬಾರದು. ಅವುಗಳಿಂದ ನಿರ್ಮಿಸಲಾದ ಬಟ್ಟಲುಗಳಲ್ಲಿ ಆಹಾರ ಸೇವಿಸಬಾರದು. ಏಕೆಂದರೆ ಇಹಲೋಕದಲ್ಲಿ ಅವು ಅವರಿಗೆ (ಅವಿಶ್ವಾಸಿಗಳಿಗೆ) ಮತ್ತು ಪರಲೋಕದಲ್ಲಿ ನಮಗಿರುವುದಾಗಿದೆ" ಎಂದು ಅಲ್ಲಾಹನ ರಸೂಲ್(ﷺ) ರವರು ಹೇಳುವುದನ್ನು

ನಾನು ಕೇಳಿದ್ದೇನೆ. [ಅಲ್‌ಬುಖಾರೀ 5426; ಮುಸ್ಲಿಮ್ 2067; ಇದು ಅಲ್‌ಬುಖಾರೀಯ ವರದಿ.]

## 10. ಆಹಾರವನ್ನು ಹೇಗೆ ಸೇವಿಸಬೇಕು?

١– عَنْ كَعْبِ بْنِ مَالِكٍ رَضِيَ اللَّـهُ عَنْهُ قَالَ: كَانَ رَسُـولُ اللَّهِ صَلَّى اللَّهُ عَلَيْهِ وَسَـلَّمَ يَأْكُلُ بِثَلَاثِ أَصَابِعَ، وَيَلْعَقُ يَدَهُ قَبْلَ أَنْ يَمْسَـحَهَا.

1. ಕಅ್‌ಬ್ ಇಬ್ನ್ ಮಾಲಿಕ್(ﷺ) ರಿಂದ ವರದಿ: ಅವರು ಹೇಳುತ್ತಾರೆ: ಅಲ್ಲಾಹನ ರಸೂಲ್(ﷺ) ರವರು ಮೂರು ಬೆರಳುಗಳಿಂದ ಆಹಾರ ಸೇವಿಸುತ್ತಿದ್ದರು ಮತ್ತು ಕೈಯನ್ನು ಒರೆಸುವುದಕ್ಕೆ ಮೊದಲು ಅದನ್ನು ಚೀಪುತ್ತಿದ್ದರು. [ಮುಸ್ಲಿಮ್ 2032]

٢– عَـنْ أَنَسٍ رَضِـيَ اللَّهُ عَنْـهُ أَنَّ رَسُـولَ اللَّهِ صَلَّـى اللَّهُ عَلَيْـهِ وَسَـلَّمَ كَانَ إِذَا أَكَلَ طَعَامًا لَعِقَ أَصَابِعَـهُ الثَّلَاثَ، قَـالَ: وَقَالَ: إِذَا سَـقَطَتْ لُقْمَةُ أَحَدِكُمْ فَلْيُمِطْ عَنْهَـا الْأَذَى، وَلْيَأْكُلْهَا، وَلَا يَدَعْهَا لِلشَّـيْطَانِ. وَأَمَرَنَا أَنْ نَسْـلُتَ الْقَصْعَةَ قَالَ: فَإِنَّكُمْ لَا تَـدْرُونَ فِي أَيِّ طَعَامِكُـمْ الْبَرَكَةُ.

2. ಅನಸ್(ﷺ) ರಿಂದ ವರದಿ: ಅವರು ಹೇಳುತ್ತಾರೆ: ಅಲ್ಲಾಹನ ರಸೂಲ್(ﷺ) ರವರು ಆಹಾರ ಸೇವಿಸಿದ ಬಳಿಕ ತಮ್ಮ ಮೂರು ಬೆರಳುಗಳನ್ನು ಚೀಪುತ್ತಿದ್ದರು. ನಂತರ ಹೇಳುತ್ತಿದ್ದರು: "ನಿಮ್ಮಲ್ಲೊಬ್ಬರ ಬಟ್ಟಲಿಂದ ಒಂದು ಆಹಾರದ ತುಣುಕು ಕೆಳಗೆ ಬಿದ್ದರೆ ಅವನು ಅದರ ಕೊಳೆಯನ್ನು ನಿವಾರಿಸಿ ತಿನ್ನಲಿ. ಅದನ್ನು ಶೈತಾನನಿಗೆ ಬಿಟ್ಟುಬಿಡದಿರಲಿ." ಬಟ್ಟಲನ್ನು ಹೀರಬೇಕೆಂದು ಅವರು ನಮ್ಮೊಂದಿಗೆ ಆದೇಶಿಸಿದರು. ಅವರು ಹೇಳಿದರು: "ನಿಮ್ಮ ಆಹಾರದ ಯಾವ ತುಣುಕಿನಲ್ಲಿ ಬರಕತ್ ಇದೆಯೆಂದು ನಿಮಗೆ ಗೊತ್ತಿಲ್ಲ." [ಮುಸ್ಲಿಮ್ 2034]

٣– عَـنِ ابْـنِ عُمَرَ رَضِـيَ اللَّـهُ عَنْهُ قَـالَ: نَهَى رَسُـولُ اللَّهِ صَلَّى اللَّـهُ عَلَيْـهِ وَسَـلَّمَ أَنْ يَقْرِنَ الرَّجُـلُ بَيْـنَ التَّمْرَتَيْنِ حَتَّـى يَسْـتَأْذِنَ أَصْحَابَهُ. [مُتَّفَـقٌ عَلَيْهِ]

3. ಇಬ್ನ್ ಉಮರ್(ﷺ) ರಿಂದ ವರದಿ: ಅವರು ಹೇಳುತ್ತಾರೆ: ತಮ್ಮ ಜೊತೆಯಲ್ಲಿರುವವರೊಂದಿಗೆ ಅನುಮತಿ ಪಡೆದ ಬಳಿಕವಲ್ಲದೆ ಒಬ್ಬ ವ್ಯಕ್ತಿ ಎರಡು ಖರ್ಜೂರಗಳನ್ನು ಒಟ್ಟಿಗೆ ತಿನ್ನುವುದನ್ನು ಅಲ್ಲಾಹನ ರಸೂಲ್(ﷺ) ರವರು ವಿರೋಧಿಸಿದ್ದಾರೆ. (ಅಂದರೆ ಎಲ್ಲರೂ ಒಟ್ಟಾಗಿ ಒಂದೇ ಬಟ್ಟಲಿನಿಂದ ತಿನ್ನುವಾಗ ಉಳಿದವರ ಅನುಮತಿಯಿಲ್ಲದೆ ಎರಡೆರಡು ತಿಂಡಿಗಳನ್ನು ಒಟ್ಟಿಗೆ ತಿನ್ನಬಾರದು). [ಅಲ್‌ಬುಖಾರೀ 2455; ಮುಸ್ಲಿಮ್ 2045; ಇದು ಮುಸ್ಲಿಮ್‌ರ ವರದಿ.]

٤– عَنْ أَبِـي هُرَيْـرَةَ رَضِيَ اللَّـهُ عَنْـهُ أَنَّ النَّبِيَّ صَلَّـى اللَّـهُ عَلَيْهِ وَسَـلَّمَ قَـالَ: لِيَـأْكُلْ أَحَدُكُمْ بِيَمِينِهِ، وَلْيَشْـرَبْ بِيَمِينِهِ، وَلْيَأْخُـذْ بِيَمِينِهِ، وَلْيُعْطِ بِيَمِينِـهِ، فَإِنَّ الشَّـيْطَانَ يَأْكُلُ بِشِـمَالِهِ، وَيَشْـرَبُ بِشِـمَالِهِ، وَيُعْطِـي بِشِـمَالِهِ، وَيَأْخُـذُ بِشِـمَالِهِ. [أَخْرَجَـهُ ابْـنُ مَاجَهْ]

4. ಅಬೂ ಹುರೈರಾ(ﷺ) ರಿಂದ ವರದಿ: ಪ್ರವಾದಿ(ﷺ) ರವರು ಹೇಳಿದರು: "ನಿಮ್ಮಲ್ಲೊಬ್ಬನು ತಿನ್ನುವಾಗ ಬಲಗೈಯಿಂದ ತಿನ್ನಲಿ, ಕುಡಿಯುವಾಗ ಬಲಗೈಯಿಂದ ಕುಡಿಯಲಿ, ತೆಗೆದುಕೊಳ್ಳುವಾಗ ಬಲಗೈಯಿಂದ ತೆಗೆದುಕೊಳ್ಳಲಿ, ಕೊಡುವಾಗ ಬಲಗೈಯಿಂದ ಕೊಡಲಿ. ಏಕೆಂದರೆ ಶೈತಾನನು ಎಡಗೈಯಿಂದ ತಿನ್ನುತ್ತಾನೆ, ಎಡಗೈಯಿಂದ ಕುಡಿಯುತ್ತಾನೆ, ಎಡಗೈಯಿಂದ ಕೊಡುತ್ತಾನೆ ಮತ್ತು ಎಡಗೈಯಿಂದ ತೆಗೆದುಕೊಳ್ಳುತ್ತಾನೆ." [ಇಬ್ನ್ ಮಾಜ 3266; ನೋಡಿ: ಅಸ್ಸಿಲ್ಸಿಲತು ಸ್ಸಹೀಹಃ 1236]

## 11. ಎಷ್ಟು ಆಹಾರ ಸೇವಿಸಬೇಕು?

١ – قَالَ اللَّهُ تَعَالَى:

﴿يَـٰبَنِىٓ ءَادَمَ خُذُوا۟ زِينَتَكُمْ عِندَ كُلِّ مَسْجِدٍ وَكُلُوا۟ وَٱشْرَبُوا۟ وَلَا تُسْرِفُوٓا۟ ۚ إِنَّهُۥ لَا يُحِبُّ ٱلْمُسْرِفِينَ ﴿٣١﴾﴾

1. ಅಲ್ಲಾಹು ತಆಲಾ ಹೇಳುತ್ತಾನೆ: "ಓ ಆದಮ್ ಸಂತತಿಗಳೇ, ಪ್ರತಿ ಆರಾಧನಾ ವೇಳೆಯಲ್ಲೂ ನೀವು ನಿಮ್ಮ ಅಲಂಕಾರ-ಗಳನ್ನು ತೊಟ್ಟುಕೊಳ್ಳಿರಿ; ತಿನ್ನಿರಿ ಮತ್ತು ಕುಡಿಯಿರಿ. ಆದರೆ ದುರ್ವ್ಯಯ ಮಾಡಬೇಡಿರಿ. ದುರ್ವ್ಯಯ ಮಾಡುವವರನ್ನು ಅವನು (ಅಲ್ಲಾಹು) ಇಷ್ಟಪಡುವುದಿಲ್ಲ." [ಕುರ್‌ಆನ್ 7:31]

٢ – عَنْ عَائِشَةَ رَضِيَ اللَّهُ عَنْهَا قَالَتْ: مَا شَبِعَ آلُ مُحَمَّدٍ صَلَّى اللَّهُ عَلَيْهِ وَسَلَّمَ مُنْذُ قَدِمَ الْمَدِينَةَ مِنْ طَعَامِ بُرٍّ ثَلَاثَ لَيَالٍ تِبَاعًا حَتَّى قُبِضَ. [مُتَّفَقٌ عَلَيْهِ]

2. ಆಯಿಶಾ(ﷺ) ರಿಂದ ವರದಿ: ಅವರು ಹೇಳುತ್ತಾರೆ: ಮದೀನಕ್ಕೆ ಆಗಮಿಸಿದ ಬಳಿಕ ತಮ್ಮ ಮರಣದ ತನಕ ಮುಹಮ್ಮದ್ (ﷺ) ರವರ ಕುಟುಂಬ ಒಮ್ಮೆಯೂ ನಿರಂತರ ಮೂರು ದಿನ ಗೋಧಿಯ ಆಹಾರವನ್ನು ಹೊಟ್ಟೆ ತುಂಬಾ ಉಂಡೇ ಇಲ್ಲ. [ಅಲ್‌ಬುಖಾರೀ 5416; ಮುಸ್ಲಿಮ್ 2970; ಇದು ಮುಸ್ಲಿಮ್‌ರ ವರದಿ.]

## 12. ಆಹಾರವನ್ನು ತೆಗಳಬಾರದು

١ – عَنْ أَبِي هُرَيْرَةَ رَضِيَ اللَّهُ عَنْهُ قَالَ: مَا عَابَ النَّبِيُّ صَلَّى اللَّهُ عَلَيْهِ وَسَلَّمَ طَعَامًا قَطُّ، إِنِ اشْتَهَاهُ أَكَلَهُ، وَإِنْ كَرِهَهُ تَرَكَهُ. [مُتَّفَقٌ عَلَيْهِ]

1. ಅಬೂ ಹುರೈರಾ(ﷺ) ರಿಂದ ವರದಿ: ಅವರು ಹೇಳುತ್ತಾರೆ: ಪ್ರವಾದಿ(ﷺ) ರವರು ಒಮ್ಮೆಯೂ ಆಹಾರವನ್ನು ತೆಗಳುತ್ತಿ-ರಲಿಲ್ಲ. ಅವರಿಗೆ ಇಷ್ಟವಾದರೆ ತಿನ್ನುತ್ತಿದ್ದರು. ಇಷ್ಟವಿಲ್ಲದಿದ್ದರೆ ಬಿಟ್ಟುಬಿಡುತ್ತಿದ್ದರು. [ಅಲ್‌ಬುಖಾರೀ 5409; ಮುಸ್ಲಿಮ್ 2064; ಇದು ಅಲ್‌ಬುಖಾರೀಯ ಪದಗಳು.]

## 13. ಆಹಾರವನ್ನು ಅತಿಯಾಗಿ ಸೇವಿಸಬಾರದು

١ – عَنِ ابْنِ عُمَرَ رَضِيَ اللَّهُ عَنْهُ عَنِ النَّبِيِّ صَلَّى اللَّهُ عَلَيْهِ وَسَلَّمَ قَالَ: الْكَافِرُ يَأْكُلُ فِي سَبْعَةِ أَمْعَاءٍ وَالْمُؤْمِنُ يَأْكُلُ فِي مِعًى وَاحِدًا. [مُتَّفَقٌ عَلَيْهِ]

1. ಇಬ್ನ್ ಉಮರ್(ﷺ) ರಿಂದ ವರದಿ: ಪ್ರವಾದಿ(ﷺ) ರವರು ಹೇಳಿದರು: "ಅವಿಶ್ವಾಸಿ ಏಳು ಕರುಳುಗಳಲ್ಲಿ ತಿನ್ನುತ್ತಾನೆ. ಆದರೆ ವಿಶ್ವಾಸಿಯು ಒಂದೇ ಕರುಳಲ್ಲಿ ತಿನ್ನುತ್ತಾನೆ." [ಅಲ್‌ಬುಖಾರೀ 5393; ಮುಸ್ಲಿಮ್ 2060; ಇದು ಮುಸ್ಲಿಮ್‌ರ ವರದಿಯಾಗಿದೆ.]

## 14. ಕೆಲವೊಮ್ಮೆ ಹೊಟ್ಟೆ ತುಂಬಾ ಉಣ್ಣಲು ಅನುಮತಿಯಿದೆ

١ – عَنْ أَبِي هُرَيْرَةَ رَضِيَ اللَّهُ عَنْهُ قَالَ: أَصَابَنِي جَهْدٌ شَدِيدٌ فَلَقِيتُ عُمَرَ بْنَ الْخَطَّابِ فَاسْتَقْرَأْتُهُ آيَةً مِنْ كِتَابِ اللَّهِ فَدَخَلَ دَارَهُ وَفَتَحَهَا عَلَيَّ فَمَشَيْتُ غَيْرَ بَعِيدٍ فَخَرَرْتُ لِوَجْهِي مِنَ الْجَهْدِ وَالْجُوعِ، فَإِذَا رَسُولُ اللَّهِ صَلَّى اللَّهُ عَلَيْهِ وَسَلَّمَ قَائِمٌ عَلَى رَأْسِي، فَقَالَ: يَا أَبَا هُرَيْرَةَ، فَقُلْتُ: لَبَّيْكَ رَسُولَ اللَّهِ وَسَعْدَيْكَ، فَأَخَذَ بِيَدِي فَأَقَامَنِي وَعَرَفَ الَّذِي بِي فَانْطَلَقَ بِي إِلَى رَحْلِهِ فَأَمَرَ لِي بِعُسٍّ مِنْ لَبَنٍ فَشَرِبْتُ مِنْهُ ثُمَّ قَالَ: عُدْ يَا أَبَا هِرٍّ. فَعُدْتُ فَشَرِبْتُ ثُمَّ قَالَ: عُدْ، فَعُدْتُ فَشَرِبْتُ حَتَّى اسْتَوَى بَطْنِي فَصَارَ كَالْقِدْحِ.

[أَخْرَجَهُ الْبُخَارِيُّ]

1. ಅಬೂ ಹುರೈರಾ(ﷺ) ರಿಂದ ವರದಿ: ಅವರು ಹೇಳುತ್ತಾರೆ: ಒಂದಿನ ನನಗೆ ಅತಿಯಾಗಿ ಹಸಿವಾಗಿತ್ತು. ಆಗ ನಾನು ಉಮರ್ ಇಬ್ನುಲ್ ಖತ್ತಾಬ್(ﷺ) ರವರನ್ನು ಭೇಟಿಯಾಗಿ ಅಲ್ಲಾಹನ ಗ್ರಂಥದ ಒಂದು ಆಯತ್ತನ್ನು ವಿವರಿಸಿಕೊ-ಡುವಂತೆ ಹೇಳಿದೆ. ಆಗ ಅವರು ತಮ್ಮ ಮನೆಯನ್ನು ಪ್ರವೇಶಿಸಿ ನನಗೆ ಅದರ ಅರ್ಥವನ್ನು ವಿವರಿಸಿಕೊಟ್ಟರು. ನಂತರ ನಾನು ನಡೆಯುತ್ತಾ ಹೆಚ್ಚು ದೂರ ಹೋಗಿರಲಿಲ್ಲ. ಅಷ್ಟರಲ್ಲೇ ಅತಿಯಾದ ಹಸಿವಿನಿಂದ ನಾನು ಮಗುಚಿ ಬಿದ್ದೆ. ಆಗ ಅಗೋ ನನ್ನ ತಲೆಯ ಬಳಿ ಅಲ್ಲಾಹನ ರಸೂಲ್(ﷺ) ರವರು ನಿಂತಿದ್ದರು. ಅವರು "ಓ ಅಬೂ ಹುರೈರಾ" ಎಂದು ಕರೆದರು. ನಾನು ಹೇಳಿದೆ: "ಓ ಅಲ್ಲಾಹನ ರಸೂಲರೇ, ನಾನು ಇಲ್ಲಿದ್ದೇನೆ." ಅವರು ನನ್ನ ಕೈಯನ್ನು ಹಿಡಿದು ನನ್ನನ್ನು ನೆಟ್ಟಗೆ ನಿಲ್ಲಿಸಿದರು. ನನ್ನ ಸ್ಥಿತಿಯನ್ನು ಅರ್ಥ ಮಾಡಿಕೊಂಡು ನನ್ನನ್ನು ಅವರ ಮನೆಗೆ ಕರೆದುಕೊಂಡು ಹೋದರು. ನಂತರ ಒಂದು ದೊಡ್ಡ ಮಡಕೆಯಲ್ಲಿ ಹಾಲು ತರುವಂತೆ ಅಲ್ಲಿರುವವರೊಂದಿಗೆ ಆದೇಶಿಸಿದರು. ನಾನು ಹಾಲನ್ನು ಸ್ವಲ್ಪ ಕುಡಿದೆ. ಆಗ ಅವರು ಹೇಳಿದರು: "ಓ ಅಬೂ ಹುರೈರಾ, ಇನ್ನೂ ಕುಡಿ". ನಾನು ಇನ್ನೂ ಸ್ವಲ್ಪ ಕುಡಿದೆ. ಅವರು ಪುನಃ "ಇನ್ನೂ ಕುಡಿ" ಎಂದರು. ನಾನು ಪುನಃ ಕುಡಿದೆ. ಹೀಗೆ ನನ್ನ ಹೊಟ್ಟೆ ಒಂದು ಬಾಣದಂತೆ ಆಗುವ ತನಕ ನಾನು ಕುಡಿದೆ. [ಅಲ್‌ಬುಖಾರೀ 5375]

## 15. ಆಹಾರ ಉಣಿಸುವುದು ಮತ್ತು ಅದನ್ನು ಹಂಚಿ ತಿನ್ನುವು-ದರಲ್ಲಿರುವ ಶ್ರೇಷ್ಠತೆ

١- عَنْ جَابِرِ بْنِ عَبْدِ اللَّهِ رَضِيَ اللَّهُ عَنْهُ قَالَ: سَمِعْتُ رَسُولَ اللَّهِ صَلَّى اللَّهُ عَلَيْهِ وَسَلَّمَ يَقُولُ: طَعَامُ الْوَاحِدِ يَكْفِي الْإِثْنَيْنِ، وَطَعَامُ الْإِثْنَيْنِ يَكْفِي الْأَرْبَعَةَ، وَطَعَامُ الْأَرْبَعَةِ يَكْفِي الثَّمَانِيَةَ. [أَخْرَجَهُ مُسْلِمٌ]

1. ಜಾಬಿರ್ ಇಬ್ನ್ ಅಬ್ದಿಲ್ಲಾಹ್(ﷺ) ರಿಂದ ವರದಿ: ಅವರು ಹೇಳುತ್ತಾರೆ: "ಒಬ್ಬನ ಆಹಾರವು ಇಬ್ಬರಿಗೆ ಸಾಕು; ಇಬ್ಬರ ಆಹಾರವು ನಾಲ್ಕು ಜನರಿಗೆ ಸಾಕು; ನಾಲ್ಕು ಜನರ ಆಹಾರವು ಎಂಟು ಜನರಿಗೆ ಸಾಕು" ಎಂದು ಅಲ್ಲಾಹನ ರಸೂಲ್(ﷺ) ರವರು ಹೇಳುವುದನ್ನು ನಾನು ಆಲಿಸಿದ್ದೇನೆ. [ಮುಸ್ಲಿಮ್ 2059]

٢- عَنْ عَبْدِ اللَّهِ بْنِ عَمْرٍو رَضِيَ اللَّهُ عَنْهُ أَنَّ رَجُلًا سَأَلَ النَّبِيَّ صَلَّى اللَّهُ عَلَيْهِ وَسَلَّمَ أَيُّ الْإِسْلَامِ خَيْرٌ؟ قَالَ: تُطْعِمُ الطَّعَامَ، وَتَقْرَأُ السَّلَامَ عَلَى مَنْ عَرَفْتَ وَعَلَى مَنْ لَمْ تَعْرِفْ. [مُتَّفَقٌ عَلَيْهِ]

2. ಅಬ್ದುಲ್ಲಾಹ್ ಇಬ್ನ್ ಅಮ್ರ್(ﷺ) ರಿಂದ ವರದಿ: "ಇಸ್ಲಾ-ಮಿನಲ್ಲಿ ಉತ್ತಮವಾದುದು ಯಾವುದು?" ಎಂದು ಒಬ್ಬ ವ್ಯಕ್ತಿ ಪ್ರವಾದಿ(ﷺ) ರವರೊಂದಿಗೆ ಕೇಳಿದಾಗ ಅವರು ಹೇಳಿದರು: "ಆಹಾರವನ್ನು ಉಣಿಸುವುದು ಮತ್ತು ಪರಿಚ-ಯವಿರುವವರಿಗೆ ಮತ್ತು ಪರಿಚಯವಿಲ್ಲದವರಿಗೆ ಸಲಾಮ್ ಹೇಳುವುದು." [ಅಲ್‌ಬುಖಾರೀ 6236; ಮುಸ್ಲಿಮ್ 39; ಇದು ಅಲ್‌ಬುಖಾರೀಯ ಪದಗಳಾಗಿವೆ.]

٣- عَنْ أَبِي أَيُّوبَ الْأَنْصَارِيِّ رَضِيَ اللَّهُ عَنْهُ قَالَ: كَانَ رَسُولُ اللَّهِ صَلَّى اللَّهُ عَلَيْهِ وَسَلَّمَ إِذَا أُتِيَ بِطَعَامٍ أَكَلَ مِنْهُ وَبَعَثَ بِفَضْلِهِ إِلَيَّ. [أَخْرَجَهُ مُسْلِمٌ]

3. ಅಬೂ ಅಯ್ಯೂಬ್ ಅಲ್‌ಅನ್ಸಾರೀ(ﷺ) ರಿಂದ ವರದಿ: ಅವರು ಹೇಳುತ್ತಾರೆ: ಅಲ್ಲಾಹನ ರಸೂಲ್(ﷺ) ರಿಗೆ ಆಹಾರ ನೀಡಲಾದಾಗ ಅವರು ಅದನ್ನು ಉಂಡು ಉಳಿದದ್ದನ್ನು ನನಗೆ ಕಳುಹಿಸಿಕೊಡುತ್ತಿದ್ದರು. [ಮುಸ್ಲಿಮ್ 2053]

## 16. ಆಹಾರ ಸೇವಿಸುವಾಗ ಅದನ್ನು ಪ್ರಶಂಸಿಸುವುದು

١- عَنْ جَابِرِ بْنِ عَبْدِ اللَّهِ رَضِيَ اللَّهُ عَنْهُ أَنَّ النَّبِيَّ صَلَّى اللَّهُ عَلَيْهِ وَسَلَّمَ سَأَلَ أَهْلَهُ الْأُدُمَ

اللَّهِ صَلَّى اللَّهُ عَلَيْهِ وَسَلَّمَ يَصُبُّ وَأَسْقِيهِمْ حَتَّى مَا بَقِيَ غَيْرِي وَغَيْرُ رَسُولِ اللَّهِ صَلَّى اللَّهُ عَلَيْهِ وَسَلَّمَ، قَالَ: ثُمَّ صَبَّ رَسُولُ اللَّهِ صَلَّى اللَّهُ عَلَيْهِ وَسَلَّمَ فَقَالَ لِي: اشْرَبْ فَقُلْتُ: لَا أَشْرَبُ حَتَّى تَشْرَبَ يَا رَسُولَ اللَّهِ، قَالَ: إِنَّ سَاقِيَ الْقَوْمِ آخِرُهُمْ شُرْبًا. [أَخْرَجَهُ مُسْلِمٌ]

1. ಅಬೂ ಕತಾದಃ(﵁) ರಿಂದ ವರದಿ: ಅವರು ಹೇಳುತ್ತಾರೆ: ಒಮ್ಮೆ ಅಲ್ಲಾಹನ ರಸೂಲ್(ﷺ) ರವರು ಖುತುಬಃ ನಿರ್ವಹಿಸಿದರು... (ಹದೀಸಿನ ಕೊನೆಯಲ್ಲಿ ಹೀಗಿದೆ:) ಆಗ ಪ್ರವಾದಿ(ﷺ) ರವರು ಹೇಳಿದರು: "ಸಭೆಯನ್ನು ಉತ್ತಮಗೊಳಿಸಿ; ನಿಮಗೆಲ್ಲರಿಗೂ ಕುಡಿಯಲು ನೀಡಲಾಗುವುದು." ಜನರು ಅವರು ಹೇಳಿದಂತೆ ಮಾಡಿದರು. ನಂತರ ಅಲ್ಲಾಹನ ರಸೂಲ್(ﷺ) ರವರು ಅವರಿಗೆ ಪಾನೀಯವನ್ನು ಸುರಿದು ಕೊಡತೊಡಗಿದರು. ಹೀಗೆ ಕೊನೆಗೆ ನಾನು ಮತ್ತು ಅಲ್ಲಾಹನ ರಸೂಲ್(ﷺ) ರವರು ಮಾತ್ರ ಕುಡಿಯಲು ಬಾಕಿಯುಳಿದೆವು. ನಂತರ ಅಲ್ಲಾಹನ ರಸೂಲ್ (ﷺ) ರವರು ಪಾನೀಯವನ್ನು ಸುರಿದು ನನಗೆ ಕುಡಿಯಲು ಕೊಟ್ಟು "ಕುಡಿ" ಎಂದರು. ನಾನು ಹೇಳಿದೆ: "ಓ ಅಲ್ಲಾಹನ ರಸೂಲರೇ, ನೀವು ಕುಡಿಯುವ ತನಕ ನಾನು ಕುಡಿಯುವುದಿಲ್ಲ." ಆಗ ಅವರು ಹೇಳಿದರು: "ಜನರಿಗೆ ಬಡಿಸುವವನು ಕೊನೆಯದಾಗಿ ಕುಡಿಯಬೇಕು". [ಮುಸ್ಲಿಮ್ 681]

## 19. ಅತಿಥಿಗಳು ಪ್ರವೇಶಿಸಬೇಕಾದ ಮತ್ತು ನಿರ್ಗಮಿಸಬೇಕಾದ ಸಮಯ

١ - قَالَ اللَّهُ تَعَالَى:

﴿ يَٰٓأَيُّهَا ٱلَّذِينَ ءَامَنُواْ لَا تَدۡخُلُواْ بُيُوتَ ٱلنَّبِيِّ إِلَّآ أَن يُؤۡذَنَ لَكُمۡ إِلَىٰ طَعَامٍ غَيۡرَ نَٰظِرِينَ إِنَىٰهُ وَلَٰكِنۡ إِذَا دُعِيتُمۡ فَٱدۡخُلُواْ فَإِذَا طَعِمۡتُمۡ فَٱنتَشِرُواْ وَلَا مُسۡتَـٔۡنِسِينَ لِحَدِيثٍۚ ﴾

1. ಅಲ್ಲಾಹು ತಆಲಾ ಹೇಳುತ್ತಾನೆ: "ಓ ಸತ್ಯವಿಶ್ವಾಸಿಗಳೇ! ಆಹಾರ

فَقَالُوا: مَا عِنْدَنَا إِلَّا خَلٌّ، فَدَعَا بِهِ، فَجَعَلَ يَأْكُلُ بِهِ وَيَقُولُ: نِعْمَ الْأُدُمُ الْخَلُّ، نِعْمَ الْأُدُمُ الْخَلُّ. [أَخْرَجَهُ مُسْلِمٌ]

1. ಜಾಬಿರ್ ಇಬ್ನ್ ಅಬ್ದಿಲ್ಲಾಹ್(﵁) ರಿಂದ ವರದಿ: ಒಮ್ಮೆ ಪ್ರವಾದಿ (ﷺ) ರವರು ಆಹಾರ ಸೇವಿಸುತ್ತಿದ್ದಾಗ ತಮ್ಮ ಪತ್ನಿಯರೊಂದಿಗೆ ವ್ಯಂಜನ (ಆಹಾರ ರುಚಿಸುವಂತೆ ಅದರೊಂದಿಗೆ ತಿನ್ನುವ ಯಾವುದಾದರೂ ವಸ್ತು) ಕೊಡುವಂತೆ ಹೇಳಿದರು. ಆಗ ಅವರು ಹುಳಿರಸದ ಹೊರತು ಬೇರೇನೂ ಇಲ್ಲವೆಂದರು. ಪ್ರವಾದಿ(ﷺ) ರವರು ಅದನ್ನು ಕೊಡುವಂತೆ ಹೇಳಿದರು. ನಂತರ ಅದರೊಂದಿಗೆ ಆಹಾರ ಸೇವಿಸುತ್ತಾ "ಹುಳಿರಸ ಎಷ್ಟು ಒಳ್ಳೆಯ ವ್ಯಂಜನ; ಹುಳಿರಸ ಎಷ್ಟು ಒಳ್ಳೆಯ ವ್ಯಂಜನ" ಎನ್ನತೊಡಗಿದರು. [ಮುಸ್ಲಿಮ್ 2052]

## 17. ಪಾನೀಯಕ್ಕೆ ಊದಬಾರದು

١ - عَنْ أَبِي سَعِيدٍ الْخُدْرِيِّ رَضِيَ اللَّهُ عَنْهُ أَنَّهُ قَالَ: نَهَى رَسُولُ اللَّهِ صَلَّى اللَّهُ عَلَيْهِ وَسَلَّمَ عَنِ الشُّرْبِ مِنْ ثُلْمَةِ الْقَدَحِ وَأَنْ يُنْفَخَ فِي الشَّرَابِ. [أَخْرَجَهُ أَبُو دَاوُدَ وَالتِّرْمِذِيُّ]

1. ಅಬೂ ಸಈದ್ ಅಲ್‌ಖುದ್ರೀ(﵁) ರಿಂದ ವರದಿ: ಅವರು ಹೇಳುತ್ತಾರೆ: ಪಾತ್ರೆಯ ಒಡೆದ ಭಾಗದಿಂದ ಕುಡಿಯುವುದನ್ನು ಮತ್ತು ಪಾನೀಯಕ್ಕೆ ಊದುವುದನ್ನು ಅಲ್ಲಾಹನ ರಸೂಲ್ (ﷺ) ರವರು ವಿರೋಧಿಸಿದ್ದಾರೆ. [ಅಬೂ ದಾವೂದ್ 3722; ಅತ್ತಿರ್ಮಿದೀ 1887]

## 18. ಬಡಿಸುವವನು ಕೊನೆಯದಾಗಿ ಕುಡಿಯಬೇಕು

١ - عَنْ أَبِي قَتَادَةَ رَضِيَ اللَّهُ عَنْهُ قَالَ: خَطَبَنَا رَسُولُ اللَّهِ صَلَّى اللَّهُ عَلَيْهِ وَسَلَّمَ -وَفِي آخِرِهِ- فَقَالَ رَسُولُ اللَّهِ صَلَّى اللَّهُ عَلَيْهِ وَسَلَّمَ: أَحْسِنُوا الْمَلَأَ، كُلُّكُمْ سَيَرْوَى قَالَ: فَفَعَلُوا، فَجَعَلَ رَسُولُ

ಸೇವಿಸುವುದಕ್ಕಾಗಿ (ನಿಮ್ಮನ್ನು ಕರೆಯಲಾದರೆ) ನಿಮಗೆ ಅನುಮತಿ ಸಿಕ್ಕಿದ ವಿನಾ ನೀವು ಪ್ರವಾದಿಯವರ ಮನೆಗಳನ್ನು ಪ್ರವೇಶಿಸಬೇಡಿ. ಆಹಾರ ಸಿದ್ಧಗೊಳ್ಳುವುದನ್ನು ವೀಕ್ಷಿಸುತ್ತಾ ಕೂರಬೇಡಿ. ಆದರೆ ನಿಮ್ಮನ್ನು ಕರೆಯಲಾದರೆ ಒಳ ಪ್ರವೇಶಿಸಿರಿ ಮತ್ತು ಆಹಾರ ಸೇವಿಸಿದ ಬಳಿಕ ಚದುರಿ ಹೋಗಿರಿ. ನೀವು ಹರಟೆ ಹೊಡೆಯುತ್ತಾ ಕೂರಬೇಡಿ." [ಕುರ್‌ಆನ್ 33:53]

## 20. ಅತಿಥಿಯನ್ನು ಗೌರವಿಸುವುದು ಮತ್ತು ಸ್ವತಃ ಅವನ ಸೇವೆ ಮಾಡುವುದು

١ – قَالَ اللَّهُ تَعَالَى:

﴿هَلْ أَتَىٰكَ حَدِيثُ ضَيْفِ إِبْرَٰهِيمَ ٱلْمُكْرَمِينَ ﴿٢٤﴾ إِذْ دَخَلُوا۟ عَلَيْهِ فَقَالُوا۟ سَلَـٰمًا ۖ قَالَ سَلَـٰمٌ قَوْمٌ مُّنكَرُونَ ﴿٢٥﴾ فَرَاغَ إِلَىٰٓ أَهْلِهِۦ فَجَآءَ بِعِجْلٍ سَمِينٍ ﴿٢٦﴾ فَقَرَّبَهُۥٓ إِلَيْهِمْ قَالَ أَلَا تَأْكُلُونَ ﴿٢٧﴾﴾

1. ಅಲ್ಲಾಹು ತಆಲಾ ಹೇಳುತ್ತಾನೆ: "ಇಬ್ರಾಹೀಮ್‌ರ ಗೌರವಾನ್ವಿತ ಅತಿಥಿಗಳ ಸಮಾಚಾರ ತಮ್ಮ ಬಳಿಗೆ ಬಂದಿದೆಯೇ? ಅವರು ಅವರ (ಇಬ್ರಾಹೀಮ್‌ರ) ಬಳಿಗೆ ಬಂದು 'ಸಲಾಮ್' ಎಂದು ಹೇಳಿದ ಸಂದರ್ಭ. ಆಗ ಅವರು ಹೇಳಿದರು: 'ಸಲಾಮ್, (ನೀವು) ಅಪರಿಚಿತ ಜನರಾಗಿರುವಿರಿ'. ತರುವಾಯ ಅವರು ಆತುರದಿಂದ ತಮ್ಮ ಪತ್ನಿಯ ಬಳಿ ತೆರಳಿದರು. ಬಳಿಕ ಒಂದು ಕೊಬ್ಬಿದ ಕರುವನ್ನು (ಬೇಯಿಸಿ) ತಂದರು. ನಂತರ ಅದನ್ನು ಅವರ ಬಳಿ ಇಟ್ಟರು. ಅವರು ಕೇಳಿದರು: 'ನೀವು ತಿನ್ನುವುದಿಲ್ಲವೇ?' " [ಕುರ್‌ಆನ್ 51:24-27]

٢ – عَنْ أَبِي شُرَيْحٍ الْكَعْبِيِّ رَضِيَ اللَّهُ عَنْهُ أَنَّ رَسُولَ اللَّهِ صَلَّى اللَّهُ عَلَيْهِ وَسَلَّمَ قَالَ: مَنْ كَانَ يُؤْمِنُ بِاللَّهِ وَالْيَوْمِ الْآخِرِ فَلْيُكْرِمْ ضَيْفَهُ، جَائِزَتُهُ يَوْمٌ وَلَيْلَةٌ، وَالضِّيَافَةُ ثَلَاثَةُ أَيَّامٍ، فَمَا بَعْدَ ذَلِكَ فَهُوَ صَدَقَةٌ، وَلَا يَحِلُّ لَهُ أَنْ يَثْوِيَ عِنْدَهُ حَتَّى يُحْرِجَهُ. [مُتَّفَقٌ عَلَيْهِ]

2. ಅಬೂ ಶುರೈಹ್ ಅಲ್‌ಕಅಬೀ(ﷺ) ರಿಂದ ವರದಿ: ಪ್ರವಾದಿ(ﷺ) ರವರು ಹೇಳಿದರು: "ಯಾರು ಅಲ್ಲಾಹನಲ್ಲಿ ಮತ್ತು ಅಂತ್ಯದಿನದಲ್ಲಿ ವಿಶ್ವಾಸವಿಡುತ್ತಾನೋ ಅವನು ತನ್ನ ಅತಿಥಿಯನ್ನು ಗೌರವಿಸಲಿ. ಅವನಿಗೆ (ಅತಿಥಿಗೆ) ನೀಡುವ ಬಹುಮಾನವು ಒಂದು ದಿನ ರಾತ್ರಿ ಆತನನ್ನು ಸತ್ಕರಿಸುವುದಾಗಿದೆ. ಅತಿಥಿ ಸತ್ಕಾರವು ಮೂರು ದಿನಗಳ ಕಾಲ ಇದೆ. ಅದಕ್ಕಿಂತ ಹೆಚ್ಚು ಆತ ತಂಗುವುದಾದರೆ ಅವನಿಗೆ ನೀಡುವ ಸತ್ಕಾರವು ದಾನಧರ್ಮವಾಗಿದೆ. ಆದರೆ ಆತಿಥೇಯನಿಗೆ ತೊಂದರೆಯಾಗುವ ತನಕ ಅವನ ಮನೆಯಲ್ಲಿ ತಂಗುವುದು ಧರ್ಮಸಮ್ಮತವಲ್ಲ." [ಅಲ್‌ಬುಖಾರೀ 6135; ಮುಸ್ಲಿಮ್ 48]

## 21. ಅತಿಥಿಯ ಸ್ಥಾನಮಾನಕ್ಕೆ ಯೋಗ್ಯವಾದ ರೀತಿಯಲ್ಲಿ ಆತನನ್ನು ಗೌರವಿಸುವುದು

١ – عَنْ أَبِي هُرَيْرَةَ رَضِيَ اللَّهُ عَنْهُ قَالَ: خَرَجَ رَسُولُ اللَّهِ صَلَّى اللَّهُ عَلَيْهِ وَسَلَّمَ ذَاتَ يَوْمٍ أَوْ لَيْلَةٍ فَإِذَا هُوَ بِأَبِي بَكْرٍ وَعُمَرَ فَقَالَ: مَا أَخْرَجَكُمَا مِنْ بُيُوتِكُمَا هَذِهِ السَّاعَةَ؟ قَالَا: الْجُوعُ يَا رَسُولَ اللَّهِ، قَالَ: وَأَنَا وَالَّذِي نَفْسِي بِيَدِهِ لَأَخْرَجَنِي الَّذِي أَخْرَجَكُمَا، قُومُوا، فَقَامُوا مَعَهُ فَأَتَى رَجُلًا مِنَ الْأَنْصَارِ فَإِذَا هُوَ لَيْسَ فِي بَيْتِهِ، فَلَمَّا رَأَتْهُ الْمَرْأَةُ قَالَتْ: مَرْحَبًا وَأَهْلًا. فَقَالَ لَهَا رَسُولُ اللَّهِ صَلَّى اللَّهُ عَلَيْهِ وَسَلَّمَ: أَيْنَ فُلَانٌ؟ قَالَتْ: ذَهَبَ يَسْتَعْذِبُ لَنَا مِنَ الْمَاءِ، إِذْ جَاءَ الْأَنْصَارِيُّ فَنَظَرَ إِلَى رَسُولِ اللَّهِ صَلَّى اللَّهُ عَلَيْهِ وَسَلَّمَ وَصَاحِبَيْهِ ثُمَّ قَالَ: الْحَمْدُ لِلَّهِ مَا أَحَدٌ الْيَوْمَ أَكْرَمَ أَضْيَافًا مِنِّي. قَالَ فَانْطَلَقَ فَجَاءَهُمْ بِعِذْقٍ

فِيهِ بُسْرٌ وَتَمْرٌ وَرُطَبٌ، فَقَالَ: كُلُوا مِنْ هَذِهِ، وَأَخَذَ الْمُدْيَةَ، فَقَالَ لَهُ رَسُولُ اللَّهِ صَلَّى اللَّهُ عَلَيْهِ وَسَلَّمَ: إِيَّاكَ وَالْحَلُوبَ فَذَبَحَ لَهُمْ فَأَكَلُوا مِنَ الشَّاةِ وَمِنْ ذَلِكَ الْعِذْقِ وَشَرِبُوا فَلَمَّا أَنْ شَبِعُوا وَرَوُوا قَالَ رَسُولُ اللَّهِ صَلَّى اللَّهُ عَلَيْهِ وَسَلَّمَ لِأَبِي بَكْرٍ وَعُمَرَ: وَالَّذِي نَفْسِي بِيَدِهِ لَتُسْأَلُنَّ عَنْ هَذَا النَّعِيمِ يَوْمَ الْقِيَامَةِ، أَخْرَجَكُمْ مِنْ بُيُوتِكُمُ الْجُوعُ ثُمَّ لَمْ تَرْجِعُوا حَتَّى أَصَابَكُمْ هَذَا النَّعِيمُ. [أَخْرَجَهُ مُسْلِمٌ]

1. ಅಬೂ ಹುರೈರಾ(رضي الله عنه) ರಿಂದ ವರದಿ: ಅವರು ಹೇಳುತ್ತಾರೆ: "ಒಂದು ದಿನ ಅಥವಾ ರಾತ್ರಿ ಪ್ರವಾದಿ(ﷺ) ರವರು ತಮ್ಮ ಮನೆಯಿಂದ ಹೊರಟರು. ಆಗ ದಾರಿ ಮಧ್ಯೆ ಅವರು ಅಬೂ ಬಕ್ರ್(رضي الله عنه) ಮತ್ತು ಉಮರ್(رضي الله عنه) ರನ್ನು ಕಂಡರು. ಅವರು ಕೇಳಿದರು: 'ಈ ಸಮಯದಲ್ಲಿ ನಿಮ್ಮನ್ನು ನಿಮ್ಮ ಮನೆಯಿಂದ ಹೊರಡಿಸಿದ್ದಾದರೂ ಏನು?' ಅವರಿಬ್ಬರು ಹೇಳಿದರು: 'ಓ ಅಲ್ಲಾಹನ ಸಂದೇಶವಾಹಕರೇ, ಹಸಿವು.' ಪ್ರವಾದಿ(ﷺ) ರವರು ಹೇಳಿದರು: 'ಮತ್ತು ನಾನು, ನನ್ನ ಆತ್ಮ ಯಾರ ಕೈಯಲ್ಲಿದೆಯೋ ಅವನ ಮೇಲಾಣೆ, ನಿಮ್ಮಿಬ್ಬರನ್ನು ಹೊರಡಿಸಿದ್ದೇ ನನ್ನನ್ನೂ ಹೊರಡಿಸಿದೆ. ನಡೆಯಿರಿ.' ಅವರಿಬ್ಬರೂ ಅವರೊಂದಿಗೆ ನಡೆದರು. ಹೀಗೆ ಅವರು ಅನ್ಸಾರ್‌ಗಳಲ್ಲಿ ಸೇರಿದ ಒಬ್ಬ ವ್ಯಕ್ತಿಯ ಮನೆಗೆ ಬಂದರು. ಆದರೆ ಆ ವ್ಯಕ್ತಿ ಮನೆಯಲ್ಲಿರಲಿಲ್ಲ. ಆ ವ್ಯಕ್ತಿಯ ಪತ್ನಿ ಪ್ರವಾದಿ(ﷺ) ರವರನ್ನು ಕಂಡಾಗ 'ಸುಸ್ವಾಗತ' ಎಂದರು. ಪ್ರವಾದಿ(ﷺ) ರವರು ಆಕೆಯೊಂದಿಗೆ ಕೇಳಿದರು: 'ಆ ವ್ಯಕ್ತಿ ಎಲ್ಲಿ?' ಆಕೆ ಹೇಳಿದರು: 'ಅವರು ನಮಗೋಸ್ಕರ ಶುದ್ಧ ನೀರನ್ನು ಹುಡುಕುತ್ತಾ ಹೋಗಿದ್ದಾರೆ.' ಆ ಅನ್ಸಾರೀ ವ್ಯಕ್ತಿ ಬಂದು ಪ್ರವಾದಿ(ﷺ) ರವರನ್ನು ಮತ್ತು ಅವರ ಇಬ್ಬರು ಸಂಗಡಿಗರನ್ನು ನೋಡುತ್ತಾ ಹೇಳಿದರು: 'ಅಲ್ಲಾಹನಿಗೆ ಸರ್ವಸ್ತುತಿ; ಇಂದು ನನ್ನ ಅತಿಥಿಗಳಿಗಿಂತಲೂ ಗೌರವಾನ್ವಿತರಾದ ಅತಿಥಿಗಳನ್ನು ಹೊಂದಿರುವವರಾರೂ ಇಲ್ಲ.' ನಂತರ ಅವರು ಹೊರಟು ಖರ್ಜೂರದ ಒಂದು ಗೊಂಚಲನ್ನು ತಂದರು. ಅದರಲ್ಲಿ ಹಣ್ಣಾಗದ, ಒಣಗಿರುವ ಮತ್ತು ಹಸಿಯಾದ ಖರ್ಜೂರಗಳಿದ್ದವು. ಅವರು ಹೇಳಿದರು: 'ಇದರಿಂದ ತಿನ್ನಿರಿ.' ನಂತರ ಅವರು ಕುರಿಯನ್ನು ಕೊಯ್ಯುವ ಚೂರಿಯನ್ನು ತೆಗೆದರು. ಆಗ ಪ್ರವಾದಿ(ﷺ) ರವರು ಹೇಳಿದರು: 'ಹಾಲು ಕೊಡುವ ಕುರಿಯನ್ನು ಕೊಯ್ಯುವುದರ ಬಗ್ಗೆ ಎಚ್ಚರವಾಗಿರು.' ಆ ವ್ಯಕ್ತಿ ಒಂದು ಕುರಿಯನ್ನು ಕೊಯ್ದು ಅವರಿಗೆ ಬಡಿಸಿದರು. ಪ್ರವಾದಿ (ﷺ) ರವರು ಮತ್ತು ಇಬ್ಬರು ಸಂಗಡಿಗರು ಆ ಕುರಿಯಿಂದ ಮತ್ತು ಖರ್ಜೂರದ ಗೊಂಚಲಿನಿಂದ ತಿಂದು ಮತ್ತು ಕುಡಿದು ಅವರಿಗೆ ಹೊಟ್ಟೆ ತುಂಬಿದಾಗ ಮತ್ತು ದಾಹ ನೀಗಿದಾಗ, ಪ್ರವಾದಿ(ﷺ) ರವರು ಅಬೂ ಬಕ್ರ್(رضي الله عنه) ಮತ್ತು ಉಮರ್(رضي الله عنه) ರೊಂದಿಗೆ ಹೇಳಿದರು: 'ನನ್ನ ಆತ್ಮ ಯಾರ ಕೈಯಲ್ಲಿದೆಯೋ ಅವನ ಮೇಲಾಣೆ, ಈ ಅನುಗ್ರಹದ ಬಗ್ಗೆ ಪುನರುತ್ಥಾನ ದಿನದಂದು ನಿಮ್ಮನ್ನು ವಿಚಾರಣೆ ಮಾಡಲಾಗುವುದು. ಹಸಿವು ನಿಮ್ಮನ್ನು ನಿಮ್ಮ ಮನೆಯಿಂದ ಹೊರಗಟ್ಟಿತು ಮತ್ತು ಈ ಅನುಗ್ರಹವು ನಿಮಗೆ ಲಭ್ಯವಾಗುವ ತನಕ ನೀವು ನಿಮ್ಮ ಮನೆಗೆ ಹಿಂದಿರುಗಿಲ್ಲ.' " [ಮುಸ್ಲಿಮ್ 2038]

## 22. ಆಹಾರ ಸೇವಿಸುವುದಕ್ಕಾಗಿ ಜನರು ಕುಳಿತುಕೊಳ್ಳುವ ವಿಧಾನ

١ – قَالَ اللَّهُ تَعَالَى:

﴿لَّيْسَ عَلَيْكُمْ جُنَاحٌ أَن تَأْكُلُوا جَمِيعًا أَوْ أَشْتَاتًا ۚ فَإِذَا دَخَلْتُم بُيُوتًا فَسَلِّمُوا عَلَىٰ أَنفُسِكُمْ تَحِيَّةً مِّنْ عِندِ اللَّهِ مُبَارَكَةً طَيِّبَةً ۚ كَذَٰلِكَ يُبَيِّنُ اللَّهُ لَكُمُ الْآيَاتِ لَعَلَّكُمْ تَعْقِلُونَ ﴿٦١﴾﴾

1. ಅಲ್ಲಾಹು ತಆಲಾ ಹೇಳುತ್ತಾನೆ: "ನೀವು ಒಟ್ಟಾಗಿ ತಿನ್ನುವುದರಲ್ಲಿ ಅಥವಾ ಬೇರೆ ಬೇರೆಯಾಗಿ ತಿನ್ನುವುದರಲ್ಲಿ ನಿಮ್ಮ ಮೇಲೆ ದೋಷವಿಲ್ಲ. ನೀವು ಮನೆಗಳನ್ನು ಪ್ರವೇಶಿಸಿದರೆ ಸ್ವತಃ ನಿಮ್ಮ ಮೇಲೆಯೇ ಸಲಾಮ್ ಹೇಳಿರಿ. ಅಲ್ಲಾಹನ ವತಿಯಿಂದಿರುವ ಅನುಗ್ರಹೀತವಾದ ಶುದ್ಧವಾದ ಅಭಿವಂದನೆ. ಹೀಗೆ ಅಲ್ಲಾಹು ನಿಮಗೆ ದೃಷ್ಟಾಂತಗಳನ್ನು ವಿವರಿಸಿಕೊಡುತ್ತಿರುವನು. ನೀವು ಚಿಂತಿಸುವವರಾಗಲೂ ಬಹುದು." [ಕುರ್‌ಆನ್ 24:61]

## 23. ಆಹಾರ ಸೇವಿಸುವುದಕ್ಕಾಗಿ ಕೂರುವ ರೂಪ

١ – عَنْ أَبِـي جُحَيْفَةَ رَضِـيَ اللَّهُ عَنْهُ قَـالَ: قَالَ رَسُـولُ اللَّهِ صَلَّى اللَّـهُ عَلَيْهِ وَسَـلَّمَ: إِنِّي لَا آكُلُ مُتَّكِئًا. [أَخْرَجَـهُ الْبُخَارِيُّ]

1. ಅಬೂ ಜುಹೈಫಾ(ﷺ) ರಿಂದ ವರದಿ: ಅವರು ಹೇಳುತ್ತಾರೆ: "ಅಲ್ಲಾಹನ ರಸೂಲ್(ﷺ) ರವರು ಹೇಳಿದರು: ನಾನು ಒರಗಿ ಕುಳಿತು ಆಹಾರ ಸೇವಿಸುವುದಿಲ್ಲ." [ಅಲ್‌ಬುಖಾರೀ 5398]

٢ – عَـنْ أَنَـسٍ رَضِـيَ اللَّـهُ عَنْـهُ قَـالَ: رَأَيْتُ النَّبِـيَّ صَلَّى اللَّهُ عَلَيْهِ وَسَـلَّمَ مُقْعِيًا يَـأْكُلُ تَمْرًا. [أَخْرَجَهُ مُسْـلِمٌ]

2. ಅನಸ್(ﷺ) ರಿಂದ ವರದಿ: ಅವರು ಹೇಳುತ್ತಾರೆ: "ಪ್ರವಾದಿ(ﷺ) ರವರು ಕುಕ್ಕರು ಕುಳಿತು ಖರ್ಜೂರ ಸೇವಿಸುವುದನ್ನು ನಾನು ಕಂಡಿದ್ದೇನೆ." [ಮುಸ್ಲಿಮ್ 2044]

٣ – عَنْ عَبْـدِ اللَّهِ بْنِ بُسْـرٍ رَضِيَ اللَّـهُ عَنْهُ قَالَ: أُهْدِيَتْ لِلنَّبِيِّ صَلَّى اللَّهُ عَلَيْهِ وَسَـلَّمَ شَـاةٌ فَجَثَى رَسُـولُ اللَّهِ صَلَّى اللَّهُ عَلَيْهِ وَسَـلَّمَ عَلَـى رُكْبَتَيْهِ يَأْكُلُ، فَقَـالَ أَعْرَابِيٌّ: مَا هَذِهِ الْجِلْسَـةُ؟ فَقَالَ: إِنَّ اللَّهَ جَعَلَنِـي عَبْدًا كَرِيمًـا، وَلَمْ يَجْعَلْنِـي جَبَّارًا عَنِيـدًا. [أَخْرَجَهُ أَبُـو دَاوُدَ وَابْنُ مَاجَه]

3. ಅಬ್ದುಲ್ಲಾಹ್ ಇಬ್ನ್ ಬುಸ್ರ್(ﷺ) ರಿಂದ ವರದಿ: ಅವರು ಹೇಳುತ್ತಾರೆ: "ಪ್ರವಾದಿ(ﷺ) ರವರಿಗೆ ಒಂದು ಕುರಿಯನ್ನು ಉಡುಗೊರೆಯಾಗಿ ನೀಡಲಾಯಿತು. ಆಗ ರಸೂಲ್(ﷺ) ರವರು ಮೊಣಕಾಲೂರಿ ಕುಳಿತು ತಿನ್ನತೊಡಗಿದರು. ಆಗ ಒಬ್ಬ ಗ್ರಾಮೀಣ ವ್ಯಕ್ತಿ ಕೇಳಿದರು: 'ಇದು ಎಂತಹ ಕೂರುವಿಕೆ?' ಪ್ರವಾದಿ(ﷺ) ರವರು ಹೇಳಿದರು: 'ಅಲ್ಲಾಹು ನನ್ನನ್ನು ಒಬ್ಬ ಗೌರವಾನ್ವಿತ ದಾಸನನ್ನಾಗಿ ಮಾಡಿದ್ದಾನೆ. ನನ್ನನ್ನು ಸರ್ವಾಧಿಕಾರಿಯನ್ನಾಗಿ, ನಿರಂಕುಶನನ್ನಾಗಿ ಮಾಡಿಲ್ಲ." [ಅಬೂ ದಾವೂದ್ 3773; ಇಬ್ನ್ ಮಾಜ 3263]

## 24. ಕೆಲಸದಲ್ಲಿರುವಾಗ ಆಹಾರ ಸೇವಿಸುವ ರೂಪ

١ – عَنْ أَنَـسٍ رَضِيَ اللَّـهُ عَنْهُ قَالَ: أُتِيَ رَسُـولُ اللَّهِ صَلَّـى اللَّهُ عَلَيْهِ وَسَـلَّمَ بِتَمْرٍ، فَجَعَـلَ النَّبِيُّ صَلَّى اللَّـهُ عَلَيْهِ وَسَـلَّمَ يَقْسِـمُهُ وَهُـوَ مُحْتَفِزٌ، يَأْكُلُ مِنْـهُ أَكْلًا ذَرِيعًـا. وَفِي رِوَايَـةٍ: أَكْلًا حَثِيثًا. [أَخْرَجَهُ مُسْـلِمٌ]

1. ಅನಸ್ ಇಬ್ನ್ ಮಾಲಿಕ್(ﷺ) ರಿಂದ ವರದಿ: ಒಮ್ಮೆ ಪ್ರವಾದಿ(ﷺ) ರವರ ಬಳಿಗೆ ಖರ್ಜೂರವನ್ನು ತರಲಾಯಿತು. ಆಗ ಪ್ರವಾದಿ (ﷺ) ರವರು ಇನ್ನೊಂದು ಕಾರ್ಯದಲ್ಲಿ ನಿರತರಾಗಿದ್ದೂ ಸಹ ಖರ್ಜೂರವನ್ನು ಪಾಲು ಮಾಡಿ ಹಂಚ ತೊಡಗಿದರು ಮತ್ತು ಆತುರದಿಂದ ತಿನ್ನತೊಡಗಿದರು." [ಮುಸ್ಲಿಮ್ 2044]

## 25. ಮಲಗುವಾಗ ನೀರಿನ ಚೀಲದ ಬಾಯನ್ನು ಕಟ್ಟುವುದು ಮತ್ತು ಅದರ ಮೇಲೆ ಅಲ್ಲಾಹನ ಹೆಸರನ್ನು ಸ್ಮರಿಸುವುದು

١ – عَـنْ جَابِرٍ رَضِيَ اللَّـهُ عَنْهُ قَالَ: قَالَ رَسُـولُ اللَّـهِ صَلَّى اللَّهُ عَلَيْهِ وَسَـلَّمَ: إِذَا اسْـتَجْنَحَ اللَّيْلُ أَوْ جُنْحُ اللَّيْـلِ، فَكُفُّوا صِبْيَانَكُمْ، فَإِنَّ الشَّـيَاطِينَ تَنْتَشِـرُ حِينَئِـذٍ، فَـإِذَا ذَهَبَ سَـاعَةٌ مِنَ الْعِشَـاءِ فَخَلُّوهُـمْ، وَأَغْلِقْ بَابَكَ وَاذْكُرِ اسْـمَ اللَّهِ، وَأَطْفِئْ مِصْبَاحَكَ وَاذْكُرِ اسْـمَ اللَّهِ، وَأَوْكِ سِقَاءَكَ وَاذْكُرِ اسْـمَ اللَّهِ، وَخَمِّرْ إِنَاءَكَ وَاذْكُرِ اسْـمَ اللَّـهِ، وَلَوْ تَعْرُضُ عَلَيْهِ شَـيْئًا. [مُتَّفَـقٌ عَلَيْهِ]

1. ಜಾಬಿರ್(ﷺ) ರಿಂದ ವರದಿ: ಪ್ರವಾದಿ(ﷺ) ರವರು ಹೇಳಿದರು:

"ರಾತ್ರಿಯು ಅದರ ರೆಕ್ಕೆಗಳನ್ನು ಚಾಚಿದರೆ (ಸೂರ್ಯಾಸ್ತವಾದರೆ) ನೀವು ನಿಮ್ಮ ಮಕ್ಕಳನ್ನು (ಹೊರ ಹೋಗುವುದರಿಂದ) ತಡೆಗಟ್ಟಿರಿ. ಏಕೆಂದರೆ ಆ ಸಮಯದಲ್ಲಿ ಶೈತಾನ್‌ಗಳು ಹಬ್ಬಿಕೊಳ್ಳುತ್ತಾರೆ. ತರುವಾಯ ಒಂದು ತಾಸಿನ ಬಳಿಕ ನೀವು ಅವರನ್ನು ಬಿಟ್ಟುಬಿಡಿರಿ. ಬಾಗಿಲನ್ನು ಮುಚ್ಚಿರಿ ಮತ್ತು ಅಲ್ಲಾಹನ ಹೆಸರನ್ನು ಸ್ಮರಿಸಿರಿ. ದೀಪವನ್ನು ಆರಿಸಿರಿ ಮತ್ತು ಅಲ್ಲಾಹನ ಹೆಸರನ್ನು ಸ್ಮರಿಸಿರಿ. ನೀರಿನ ಚೀಲದ ಬಾಯನ್ನು ಕಟ್ಟಿರಿ ಮತ್ತು ಅಲ್ಲಾಹನ ಹೆಸರನ್ನು ಸ್ಮರಿಸಿರಿ. ಪಾತ್ರೆಯನ್ನು ಮುಚ್ಚಿರಿ ಮತ್ತು ಅಲ್ಲಾಹನ ಹೆಸರನ್ನು ಸ್ಮರಿಸಿರಿ. ಆದರೂ ಅದರ ಮೇಲೆ ಏನಾದರೂ ಇಟ್ಟುಬಿಡಿರಿ." [ಅಲ್‌ಬುಖಾರೀ 3280; ಮುಸ್ಲಿಮ್ 2016]

## 26. ಸೇವಕನೊಂದಿಗೆ ಆಹಾರ ಸೇವಿಸುವುದು

١ – عَنِ أَبِـي هُرَيْـرَةَ رَضِيَ اللَّـهُ عَنْـهُ أَنَّ النَّبِيَّ صَلَّى اللَّـهُ عَلَيْهِ وَسَـلَّمَ قَـالَ: إِذَا أَتَـى أَحَدَكُمْ خَادِمُـهُ بِطَعَامِهِ فَـإِنْ لَمْ يُجْلِسْـهُ مَعَـهُ فَلْيُنَاوِلْهُ أُكْلَـةً أَوْ أُكْلَتَيْنِ، أَوْ لُقْمَـةً أَوْ لُقْمَتَيْـنِ، فَإِنَّهُ وَلِيَ حَرَّهُ وَعِلَاجَـهُ. [مُتَّفَـقٌ عَلَيْهِ]

1. ಅಬೂ ಹುರೈರಃ(ﷺ) ರಿಂದ ವರದಿ: ಪ್ರವಾದಿ(ﷺ) ರವರು ಹೇಳಿದರು: "ಸೇವಕನು ಆಹಾರದೊಂದಿಗೆ ನಿಮ್ಮ ಬಳಿ ಬರುವಾಗ, ನೀವು ಅವನನ್ನು ನಿಮ್ಮ ಜೊತೆಗೆ ಕೂರಿಸುವುದಿಲ್ಲವೆಂದಾದರೆ ಅವನು ಒಂದು ಅಥವಾ ಎರಡು ತುತ್ತು ಆಹಾರವನ್ನು ತೆಗೆದುಕೊಳ್ಳಲು ಹೇಳಿರಿ. ಏಕೆಂದರೆ ಅವನು ಅದರ ಬಿಸಿಯನ್ನು ಸಹಿಸಿದ್ದಾನೆ ಮತ್ತು ಅದನ್ನು ಉತ್ತಮವಾಗಿ ತಯಾರಿಸಲು ಕಷ್ಟಪಟ್ಟಿದ್ದಾನೆ." [ಅಲ್‌ಬುಖಾರೀ 5460; ಮುಸ್ಲಿಮ್ 1663]

## 27. ನಮಾಝ್‌ನ ಸಮಯದಲ್ಲಿ ಆಹಾರ ಬಡಿಸಲಾದರೆ ಅದನ್ನು ಉಣ್ಣಲು ಪ್ರಾಶಸ್ತ್ಯ ನೀಡುವುದು

١ – عَنْ أَنَـسِ بْنِ مَالِكٍ رَضِيَ اللَّـهُ عَنْهُ عَنِ النَّبِيِّ صَلَّى اللَّهُ عَلَيْهِ وَسَـلَّمَ قَـالَ: إِذَا وُضِعَ الْعَشَـاءُ وَأُقِيمَتِ الصَّـلَاةُ فَابْدَؤُا بِالْعَشَـاءِ. [مُتَّفَقٌ عَلَيْهِ]

1. ಅನಸ್(ﷺ) ರಿಂದ ವರದಿ: ಪ್ರವಾದಿ(ﷺ) ರವರು ಹೇಳಿದರು: "ರಾತ್ರಿಯೂಟವನ್ನು ಬಡಿಸಲಾಗುವಾಗ ನಮಾಝ್‌ಗಾಗಿ ಇಕಾಮತ್ ನೀಡಲಾದರೆ ನೀವು ಮೊದಲು ರಾತ್ರಿಯೂಟವನ್ನು ಉಣ್ಣಿರಿ." [ಅಲ್‌ಬುಖಾರೀ 5463; ಮುಸ್ಲಿಮ್ 557]

## 28. ಬಟ್ಟಲಿನಿಂದ ತಿನ್ನುವುದು ಹೇಗೆ?

١ – عَـنِ ابْنِ عَبَّـاسٍ رَضِيَ اللَّـهُ عَنْهُ عَـنِ النَّبِيِّ صَلَّـى اللَّهُ عَلَيْـهِ وَسَـلَّمَ قَـالَ: إِذَا أَكَلَ أَحَدُكُمْ طَعَامًـا فَلَا يَـأْكُلْ مِـنْ أَعْلَـى الصَّحْفَـةِ وَلَكِنْ لِيَأْكُلْ مِنْ أَسْـفَلِهَا فَإِنَّ الْبَرَكَةَ تَنْـزِلُ مِنْ أَعْلَاهَا. [أَخْرَجَـهُ أَبُـو دَاوُدَ وَالتِّرْمِذِيُّ]

1. ಇಬ್ನ್ ಅಬ್ಬಾಸ್(ﷺ) ರಿಂದ ವರದಿ: ಅಲ್ಲಾಹನ ರಸೂಲ್ (ﷺ) ರವರು ಹೇಳಿದರು: "ನಿಮ್ಮಲ್ಲೊಬ್ಬರು ಆಹಾರವನ್ನು ಸೇವಿಸುವಾಗ ಬಟ್ಟಲ ಮೇಲ್ಭಾಗದಿಂದ ಸೇವಿಸಬಾರದು. ಬದಲಾಗಿ ಬಟ್ಟಲ ಕೆಳಭಾಗದಿಂದ ಸೇವಿಸಲಿ. ಏಕೆಂದರೆ ಬರಕತ್ ಬಟ್ಟಲ ಮೇಲ್ಭಾಗದಿಂದ ಇಳಿಯುತ್ತದೆ." [ಅಬೂ ದಾವೂದ್ 3772; ಅತ್ತಿರ್ಮಿದೀ 1805]

## 29. ಹಾಲು ಕುಡಿದರೆ ಏನು ಮಾಡಬೇಕು?

١ – عَنِ ابْـنِ عَبَّـاسٍ رَضِيَ اللَّـهُ عَنْـهُ أَنَّ النَّبِيَّ صَلَّى اللَّهُ عَلَيْهِ وَسَـلَّمَ شَـرِبَ لَبَنًا، ثُـمَّ دَعَا بِمَاءٍ فَتَمَضْمَـضَ وَقَالَ: إِنَّ لَهُ دَسَـمًا. [مُتَّفَـقٌ عَلَيْهِ]

1. ಇಬ್ನ್ ಅಬ್ಬಾಸ್(ﷺ) ರಿಂದ ವರದಿ: ಪ್ರವಾದಿ(ﷺ) ರವರು ಹಾಲನ್ನು ಕುಡಿದರು; ತರುವಾಯ ನೀರನ್ನು ತರಿಸಿ ಬಾಯಿ ಮುಕ್ಕಳಿಸಿ ಹೇಳಿದರು: "ಅದರಲ್ಲಿ ಜಿಡ್ಡು ಇದೆ." [ಅಲ್‌ಬುಖಾರೀ 211; ಮುಸ್ಲಿಮ್ 358]

## 30. ಆಹಾರವನ್ನು ಸೇವಿಸಿದ ಬಳಿಕ ಅಲ್ಲಾಹನನ್ನು

**ಸ್ತುತಿಸುವುದು**

١ – عَنْ أَنَسٍ رَضِيَ اللَّهُ عَنْهُ قَالَ: قَالَ رَسُولُ اللَّهِ صَلَّى اللَّهُ عَلَيْهِ وَسَلَّمَ: إِنَّ اللَّهَ لَيَرْضَى عَنِ الْعَبْدِ أَنْ يَأْكُلَ الْأَكْلَةَ فَيَحْمَدَهُ عَلَيْهَا أَوْ يَشْرَبَ الشَّرْبَةَ فَيَحْمَدَهُ عَلَيْهَا. [أَخْرَجَهُ مُسْلِمٌ]

1. ಅನಸ್(﵁) ರಿಂದ ವರದಿ: ಅವರು ಹೇಳುತ್ತಾರೆ: ಪ್ರವಾದಿ(ﷺ) ರವರು ಹೇಳಿದರು: "ಆಹಾರವನ್ನು ಸೇವಿಸಿ ಅದಕ್ಕಾಗಿ ಅಲ್ಲಾಹನನ್ನು ಸ್ತುತಿಸುವ ಅಥವಾ ಪಾನೀಯವನ್ನು ಸೇವಿಸಿ ಅದಕ್ಕಾಗಿ ಅಲ್ಲಾಹನನ್ನು ಸ್ತುತಿಸುವ ಒಬ್ಬ ದಾಸನ ಬಗ್ಗೆ ಅಲ್ಲಾಹು ಸಂತೃಪ್ತನಾಗುವನು." [ಮುಸ್ಲಿಮ್ 2734]

## 31. ಆಹಾರವನ್ನು ಸೇವಿಸಿದ ಬಳಿಕ ಏನು ಹೇಳಬೇಕು?

١ – عَنْ أَبِي أُمَامَةَ رَضِيَ اللَّهُ عَنْهُ أَنَّ النَّبِيَّ صَلَّى اللَّهُ عَلَيْهِ وَسَلَّمَ كَانَ إِذَا رَفَعَ مَائِدَتَهُ قَالَ: الْحَمْدُ لِلَّهِ كَثِيرًا طَيِّبًا مُبَارَكًا فِيهِ، غَيْرَ مَكْفِيٍّ وَلَا مُوَدَّعٍ وَلَا مُسْتَغْنًى عَنْهُ رَبَّنَا. [أَخْرَجَهُ الْبُخَارِيُّ]

1. ಅಬೂ ಉಮಾಮಃ(﵁) ರಿಂದ ವರದಿ: ಊಟ ಮಾಡಿ ಮುಗಿಸಿದ ಬಳಿಕ ಪ್ರವಾದಿ(ﷺ) ರವರು ಹೀಗೆಂದರು: "ಅಲ್‌ಹಮ್ದು ಲಿಲ್ಲಾಹಿ ಕಸೀರನ್ ತಯ್ಯಿಬನ್ ಮುಬಾರಕನ್ ಫೀಹಿ, ಗೈರ ಮಕ್‌ಫಿಯ್ಯಿನ್ ವಲಾ ಮುವದ್ದಇನ್ ವಲಾ ಮುಸ್ತಗ್ನನ್ ಅನ್‌ಹು ರಬ್ಬನಾ. (ಅಲ್ಲಾಹನಿಗೆ ಅತ್ಯಧಿಕ, ಉತ್ತಮ ಮತ್ತು ಅನುಗ್ರಹೀತ ಸ್ತುತಿ. ಕೊನೆಯಿಲ್ಲದ ವಿದಾಯವಿಲ್ಲದ ಹಂಚಿಕೊಳ್ಳಲಾಗದ ಸ್ತುತಿ. ಅವನು ನಮ್ಮ ರಬ್ಬ್.)" [ಅಲ್‌ಬುಖಾರೀ 5458]

٢ – عَنْ أَبِي أُمَامَةَ رَضِيَ اللَّهُ عَنْهُ أَنَّ النَّبِيَّ صَلَّى اللَّهُ عَلَيْهِ وَسَلَّمَ كَانَ إِذَا فَرَغَ مِنْ طَعَامِهِ –وَقَالَ مَرَّةً– إِذَا رَفَعَ مَائِدَتَهُ قَالَ: الْحَمْدُ لِلَّهِ الَّذِي كَفَانَا وَأَرْوَانَا غَيْرَ مَكْفِيٍّ وَلَا مَكْفُورٍ. [أَخْرَجَهُ الْبُخَارِيُّ]

2. ಅಬೂ ಉಮಾಮಃ(﵁) ರಿಂದ ವರದಿ: ಊಟ ಮಾಡಿ ಮುಗಿಸಿದ ಬಳಿಕ ಪ್ರವಾದಿ(ﷺ) ರವರು ಹೀಗೆಂದರು: "ಅಲ್‌ಹಮ್ದು ಲಿಲ್ಲಾಹಿಲ್ಲದೀ ಕಫಾನಾ ವಅರ್ವಾನಾ ಗೈರ ಮಕ್‌ಫಿಯ್ಯಿನ್ ವಲಾ ಮಕ್‌ಫೂರಿನ್ (ನಮಗೆ ಸಾಕು ಮಾಡಿದ, ನಮಗೆ ಕುಡಿಯಲು ನೀಡಿದ ಅಲ್ಲಾಹನಿಗೆ ಸ್ತುತಿ. ಕೊನೆಯಿಲ್ಲದ ಕೃತಘ್ನತೆಯಿಲದ ಸ್ತುತಿ)." [ಅಲ್‌ಬುಖಾರೀ 5459]

٣ – عَنْ أَبِي أَيُّوبَ الْأَنْصَارِيِّ رَضِيَ اللَّهُ عَنْهُ قَالَ: كَانَ رَسُولُ اللَّهِ صَلَّى اللَّهُ عَلَيْهِ وَسَلَّمَ إِذَا أَكَلَ أَوْ شَرِبَ قَالَ: الْحَمْدُ لِلَّهِ الَّذِي أَطْعَمَ وَسَقَى وَسَوَّغَهُ وَجَعَلَ لَهُ مَخْرَجًا. [أَخْرَجَهُ أَبُو دَاوُدَ]

3. ಅಬೂ ಅಯ್ಯೂಬ್ ಅಲ್‌ಅನ್ಸಾರೀ(﵁) ರಿಂದ ವರದಿ: ಅವರು ಹೇಳುತ್ತಾರೆ: ಪ್ರವಾದಿ(ﷺ) ರವರು ಆಹಾರ ಅಥವಾ ಪಾನೀಯ ಸೇವಿಸಿದ ಬಳಿಕ ಹೇಳುತ್ತಿದ್ದರು: "ಅಲ್‌ಹಮ್ದು ಲಿಲ್ಲಾಹಿಲ್ಲದೀ ಅತ್‌ಅಮ, ವಸಕಾ, ವಸವ್ವಗಹು, ವಜಅಲ ಲಹೂ ಮಖ್ರಜನ್ (ತಿನ್ನಲು ನೀಡಿದ, ಕುಡಿಯಲು ನೀಡಿದ, ಅದನ್ನು ಪಚನವಾಗುವಂತೆ ಮಾಡಿದ ಮತ್ತು ಅದಕ್ಕೆ ಹೊರಹೋಗಲು ದ್ವಾರವನ್ನುಂಟುಮಾಡಿದ ಅಲ್ಲಾಹನಿಗೆ ಸ್ತುತಿ)." [ಅಬೂ ದಾವೂದ್ 3851]

٤ – اللَّهُمَّ أَطْعَمْتَ وَأَسْقَيْتَ وَأَغْنَيْتَ وَأَقْنَيْتَ وَهَدَيْتَ وَأَحْيَيْتَ، فَلَكَ الْحَمْدُ عَلَى مَا أَعْطَيْتَ. [أَخْرَجَهُ أَحْمَدُ]

4. "ಅಲ್ಲಾಹುಮ್ಮ ಅತ್‌ಅಮ್ತ, ವಅಸ್ಕಯ್ತ, ವಅಗ್ನಯ್ತ ವಅಕ್ನಯ್ತ, ವಹದಯ್ತ, ವಅಹ್ಯಯ್ತ, ಫಲಕಲ್ ಹಮ್ದು ಅಲಾ ಮಾ ಅಅ□ತಯ್ತ (ಓ ಅಲ್ಲಾಹ್, ನೀನು ತಿನ್ನಲು ನೀಡಿರುವೆ, ನೀನು ಕುಡಿಯಲು ನೀಡಿರುವೆ, ನೀನು ಸಾಕು ಮಾಡಿರುವೆ, ನೀನು ಮಾರ್ಗದರ್ಶನ ಮಾಡಿರುವೆ ಮತ್ತು ನೀನು ಜೀವವನ್ನು ನೀಡಿರುವೆ. ಆದ್ದರಿಂದ ನೀನು ದಯಪಾಲಿಸಿರುವ ಎಲ್ಲದಕ್ಕೂ ನಿನಗೆ ಸ್ತುತಿ)." [ಅಹ್ಮದ್ 16712]

## 32. ಆಹಾರ ನೀಡಿದವನಿಗೆ ಅತಿಥಿಯ ಪ್ರಾರ್ಥನೆ

١ – اللَّهُمَّ بَارِكْ لَهُمْ فِي مَا رَزَقْتَهُمْ، وَاغْفِرْ لَهُمْ وَارْحَمْهُمْ. [أَخْرَجَهُ مُسْلِمٌ]

1. "ಅಲ್ಲಾಹುಮ್ಮ ಬಾರಿಕ್ ಲಹುಮ್ ಫೀ ಮಾ ರಝುಕ್ತಹುಮ್, ವಗ್ಫಿರ್ ಲಹುಮ್ ವರ್ಹಮ್‌ಹುಮ್ (ಓ ಅಲ್ಲಾಹ್, ಅವರಿಗೆ ನೀನು ನೀಡಿರುವ ಅನ್ನಾಧಾರಗಳಲ್ಲಿ ಅವರಿಗೆ ಬರಕತ್ ನೀಡು, ಅವರಿಗೆ ಪಾಪಮುಕ್ತಿ ನೀಡು ಮತ್ತು ಅವರಿಗೆ ಕರುಣೆ ತೋರು)." [ಮುಸ್ಲಿಮ್ 2042]

٢ – عَنْ أَنَسٍ رَضِيَ اللَّهُ عَنْهُ أَنَّ النَّبِيَّ صَلَّى اللَّهُ عَلَيْهِ وَسَلَّمَ جَاءَ إِلَى سَعْدِ بْنِ عُبَادَةَ فَجَاءَ بِخُبْزٍ وَزَيْتٍ، فَأَكَلَ ثُمَّ قَالَ النَّبِيُّ صَلَّى اللَّهُ عَلَيْهِ وَسَلَّمَ: أَفْطَرَ عِنْدَكُمُ الصَّائِمُونَ، وَأَكَلَ طَعَامَكُمُ الْأَبْرَارُ، وَصَلَّتْ عَلَيْكُمُ الْمَلَائِكَةُ. [أَخْرَجَهُ أَبُو دَاوُدَ وَابْنُ مَاجَه]

2. ಅನಸ್(ﷺ) ರಿಂದ ವರದಿ: ಒಮ್ಮೆ ಪ್ರವಾದಿ(ﷺ) ರವರು ಸಅದ್ ಇಬ್ನ್ ಉಬಾದಃ(ﷺ) ರವರ ಮನೆಗೆ ಬಂದಾಗ ಅವರು ರೊಟ್ಟಿ ಮತ್ತು ಎಣ್ಣೆಯನ್ನು ತಂದುಕೊಟ್ಟರು. ಪ್ರವಾದಿ(ﷺ) ರವರು ಅದನ್ನು ತಿಂದ ಬಳಿಕ ಹೇಳಿದರು: "ಅಫ್ತರ ಇಂದಕುಮು ಸ್ಸಾಇಮೂನ, ವಅಕಲ ತಆಮಕುಮುಲ್ ಅಬ್ರಾರು, ವಸಲ್ಲತ್ ಅಲೈಕುಮುಲ್ ಮಲಾಇಕಃ (ಉಪವಾಸವಿರುವವರು ನಿಮ್ಮ ಬಳಿ ಪಾರಣೆ ಮಾಡುವಂತಾಗಲಿ, ಸಜ್ಜನರು ನಿಮ್ಮ ಆಹಾರವನ್ನು ಸೇವಿಸುವಂತಾಗಲಿ ಮತ್ತು ಮಲಕ್‌ಗಳು ನಿಮಗೆ ಪ್ರಾರ್ಥಿಸುವಂತಾಗಲಿ)". [ಅಬೂ ದಾವೂದ್ 3854; ಇಬ್ನ್ ಮಾಜ 1747]

## 33. ನೀರುಣಿಸಿದವರಿಗೆ ಅಥವಾ ಅದನ್ನು ಉದ್ದೇಶಿಸಿದವರಿಗೆ ಪ್ರಾರ್ಥಿಸುವುದು

١ –اللَّهُمَّ أَطْعِمْ مَنْ أَطْعَمَنِي، وَأَسْقِ مَنْ أَسْقَانِي. [أَخْرَجَهُ مُسْلِمٌ]

1. "ಅಲ್ಲಾಹುಮ್ಮ ಅತ್‌ಇಮ್ ಮನ್ ಅತ್‌ಅಮನೀ, ವಅಸ್ಕಿ ಮನ್ ಅಸ್ಕಾನೀ (ಓ ಅಲ್ಲಾಹ್, ನನಗೆ ತಿನ್ನಲು ನೀಡಿದವನಿಗೆ ನೀನು ತಿನ್ನಲು ನೀಡು ಮತ್ತು ನನಗೆ ಕುಡಿಯಲು ನೀಡಿದವನಿಗೆ ನೀನು ಕುಡಿಯಲು ನೀಡು)." [ಮುಸ್ಲಿಮ್ 2055] ■

---

*18 ನೇ ಪುಟದಿಂದ*

## ಇಸ್ಲಾಮ್ ಪ್ರತಿಪಾದಿಸುವ ಆರ್ಥಿಕ ಸಿದ್ಧಾಂತ

ಮಾತ್ರವಲ್ಲದೆ, ಝಕಾತನ್ನು ಸಂಗ್ರಹಿಸಿಟ್ಟು ನಿರ್ವಹಿಸಿದರೆ ಇನ್ಶೂರೆನ್ಸ್‌ನ ಅಗತ್ಯವೇ ಉದ್ಭವಿಸುವುದಿಲ್ಲ. ಇಸ್ಲಾಮಿನ ಆರ್ಥಿಕ ಪದ್ಧತಿಯನ್ನು ಆರ್ಥಿಕರಂಗದ ಒಂದು ಸರ್ವರೋಗ ಸಿದ್ಧೌಷಧ ಎಂದು ಪರಿಗಣಿಸಬಹುದಾಗಿದೆ. ಆದರೆ ಇದರ ಹಿರಿಮೆಯನ್ನು ಅರಿತುಕೊಂಡು ಪ್ರಯೋಗಕ್ಕಿಳಿಸುವುದರಲ್ಲಿ ಮುಸ್ಲಿಮ್ ರಾಷ್ಟ್ರಗಳು ಕೂಡಾ ಹೆಚ್ಚಿನ ಮುತುವರ್ಜಿ ವಹಿಸಿಲ್ಲ. ಅದನ್ನು ಪ್ರಾಯೋಗಿಕವಾಗಿ ಅಳವಡಿಸಿಕೊಂಡು ತೋರಿಸಿಕೊಟ್ಟರೆ ಲೋಕವು ಸ್ವಾಗತಿಸುವುದರಲ್ಲಿ ಸಂಶಯವಿಲ್ಲ.

ಭೂಮಿಯಲ್ಲಿ ಸ್ವರ್ಗವನ್ನು ಸ್ಥಾಪಿಸುತ್ತೇವೆಯೆಂದು ವಾದಿಸಿದ ರಷ್ಯಾ ಯಾವುದೇ ಬಾಹ್ಯ ಹಸ್ತಕ್ಷೇಪವೂ ಇಲ್ಲದೆ ಕುಸಿದುಬಿದ್ದು ತನ್ನ ಆರ್ಥಿಕ ಸಿದ್ಧಾಂತವನ್ನು ಎಸೆದುಬಿಟ್ಟಿರುವುದನ್ನು ನಾವು ನೋಡಿದೆವು. ಚೀನಾವೂ ಅದೇ ದಾರಿಯನ್ನು ಅನುಗಮಿಸಿದೆ. ಅಮೇರಿಕ ಮತ್ತಿತರ ಅಭಿವೃದ್ಧಿ ಹೊಂದಿದ ರಾಷ್ಟ್ರಗಳಲ್ಲಿ ಆರ್ಥಿಕ ಕುಸಿತ ಉಂಟಾಗಿದೆ. ಆದರೆ ಅವುಗಳು ಅರಬಿಗಳು ತಮ್ಮ ತಮ್ಮಲ್ಲೇ ಹೊಡೆದಾಡಿಕೊಳ್ಳುವಂತೆ ಮಾಡಿ ತಮ್ಮ ಶಸ್ತ್ರಾಸ್ತ್ರಗಳಿಗೆ ಮಾರುಕಟ್ಟೆ ಸೃಷ್ಟಿಸುವ ಮೂಲಕ ಆರ್ಥಿಕ ಕುಸಿತಕ್ಕೆ ತೇಪೆ ಹಚ್ಚಿ ತನ್ನ ಪ್ರಜೆಗಳನ್ನು ಸಮಾಧಾನಪಡಿಸುತ್ತಿದೆ. ಆದರೆ ಆ ಆಟ ಹೆಚ್ಚು ಕಾಲ ನಡೆಯದು. ಜಗತ್ತಿನಲ್ಲಿ ಇಸ್ಲಾಮೀ ಆರ್ಥಿಕ ವ್ಯವಸ್ಥೆ ಸ್ಥಾಯಿ ಪರಿಹಾರವಾಗಿ ಪ್ರತ್ಯಕ್ಷವಾಗುವ ಕಾಲ ದೂರವಿಲ್ಲ. ■

# ಪ್ರವಾದಿ ನೂಹ್(عليه السلام): ದೌತ್ಯ ಮತ್ತು ಸಂದೇಶ

ಸತ್ಯವಿಶ್ವಾಸ ಮತ್ತು ಅದರ ಬುನಾದಿಯಲ್ಲಿರುವ ಸತ್ಕರ್ಮಗಳೇ ಅಂತಿಮವಾಗಿ ರಕ್ಷಣೆಯ ಮಾರ್ಗವಾಗಿದೆ. ಇದರ ಹೊರತಾಗಿ ಅದೆಷ್ಟು ಸಜ್ಜನ ವ್ಯಕ್ತಿಯ ರಕ್ತಸಂಬಂಧದಲ್ಲಿ ಒಳಪಟ್ಟಿದ್ದರೂ ಅದರ ಹೆಸರಲ್ಲಿ ಅಲ್ಲಾಹನು ಪ್ರತ್ಯೇಕ ಪರಿಗಣನೆ ನೀಡುವುದಿಲ್ಲವೆಂದು ಈ ಘಟನೆಯಿಂದ ಸ್ಪಷ್ಟವಾಗುತ್ತದೆ.

ಮಾನವ ಜನಾಂಗವನ್ನು ಏಕದೇವವಿಶ್ವಾಸದೆಡೆಗೆ ಆಮಂತ್ರಿಸಲು ನಿಯೋಜಿತರಾದ ಪ್ರವಾದಿಗಳಲ್ಲಿ ನೂಹ್(عليه السلام) ಮೊದಲಿಗರೆನ್ನುವುದು ಇತಿಹಾಸಕಾರರ ಅಭಿಪ್ರಾಯವಾಗಿದೆ. ನಮಗೆ ತಿಳಿದಮಟ್ಟಿಗೆ ಇದು ಸರಿಯಾಗಿದೆ. ಪವಿತ್ರ ಕುರ್‌ಆನ್ ಅವರು ಒಂಬೈನೂರ ಐವತ್ತು ವರ್ಷಗಳ ಕಾಲ ತಮ್ಮ ದೌತ್ಯದೊಂದಿಗೆ ಜನರ ಮಧ್ಯೆ ಜೀವಿಸಿದ್ದರೆಂದು ಹೇಳುತ್ತದೆ.

﴿ وَلَقَدْ أَرْسَلْنَا نُوحًا إِلَىٰ قَوْمِهِۦ فَلَبِثَ فِيهِمْ أَلْفَ سَنَةٍ إِلَّا خَمْسِينَ عَامًا ﴾

“ನಾವು ನೂಹರನ್ನು ಅವರ ಜನಾಂಗದ ಕಡೆಗೆ ಕಳುಹಿಸಿದೆವು. ಅವರು ಅವರ ನಡುವೆ ಐವತ್ತು ಕಡಿಮೆ ಒಂದು ಸಾವಿರ ವರ್ಷಗಳಿದ್ದರು...” (29:14)

ಪ್ರತಿಯೋರ್ವ ಪ್ರವಾದಿ ಸಾಕ್ಷಾತ್ ಸೃಷ್ಟಿಕರ್ತನನ್ನು ಮಾತ್ರ ಆರಾಧಿಸಿರಿ ಎಂಬ ಪ್ರಥಮ ಮತ್ತು ಪ್ರಧಾನ ಕಾರ್ಯದೆಡೆಗೆ ಜನರನ್ನು ಆಮಂತ್ರಿಸಿದರು. ಪ್ರವಾದಿ ನೂಹ್(عليه السلام) ರು ಕೂಡಾ ಅದನ್ನೇ ಮಾಡಿದರು.

﴿ وَلَقَدْ أَرْسَلْنَا نُوحًا إِلَىٰ قَوْمِهِۦٓ إِنِّي لَكُمْ
نَذِيرٌ مُّبِينٌ ۝٢٥ أَن لَّا تَعْبُدُوٓا۟ إِلَّا ٱللَّهَ ۖ إِنِّيٓ أَخَافُ عَلَيْكُمْ عَذَابَ يَوْمٍ أَلِيمٍ ۝٢٦ ﴾

“ನಾವು ನೂಹರನ್ನು ಅವರ ಜನಾಂಗದ ಕಡೆಗೆ ಕಳುಹಿಸಿದಾಗ ಅವರು ಹೀಗೆಂದರು: ನಾನು ನಿಮಗೆ ಸುವ್ಯಕ್ತ ಎಚ್ಚರಿಕೆ ನೀಡುತ್ತೇನೆ. ನೀವು ಅಲ್ಲಾಹನ ಹೊರತು ಇನ್ನಾರನ್ನೂ ಆರಾಧಿಸದಿರಿ. ಅನ್ಯಥಾ ನಿಮ್ಮ ಮೇಲೆ ಒಂದು ದಿನ ವೇದನಾಯುಕ್ತ ಯಾತನೆ ಎರಗುವುದೆಂದು ನಾನು ಭಯಪಡುತ್ತೇನೆ.” (11:25-26)

﴿ إِنَّآ أَرْسَلْنَا نُوحًا إِلَىٰ قَوْمِهِۦٓ أَنْ أَنذِرْ قَوْمَكَ مِن قَبْلِ أَن يَأْتِيَهُمْ عَذَابٌ أَلِيمٌ ۝١ قَالَ يَٰقَوْمِ إِنِّي لَكُمْ نَذِيرٌ مُّبِينٌ ۝٢ أَنِ ٱعْبُدُوا۟ ٱللَّهَ وَٱتَّقُوهُ وَأَطِيعُونِ ۝٣ ﴾

“ನಾವು ನೂಹರನ್ನು ಅವರ ಜನಾಂಗದ ಕಡೆಗೆ ರವಾನಿಸಿದೆವು. ಅವರು ತಮ್ಮ ಜನಾಂಗದವರಿಗೆ -ಅವರ ಮೇಲೆ ಒಂದು ವೇದನಾಯುಕ್ತ ಯಾತನೆ ಬಂದೆರಗುವುದಕ್ಕೆ ಮುಂಚೆಯೇ ಎಚ್ಚರಿಕೆ ನೀಡಲೆಂದು. ಅವರು ಹೇಳಿದರು: ನನ್ನ ಜನಾಂಗದವರೇ, ನಾನು ನಿಮಗೆ ಸುಸ್ಪಷ್ಟ ಎಚ್ಚರಿಕೆ ಕೊಡುವವನಾಗಿದ್ದೇನೆ. ಅಲ್ಲಾಹನ ಆರಾಧನೆ ಮಾಡಿರಿ. ಅವನನ್ನು ಭಯಪಡಿರಿ ಮತ್ತು ನನ್ನನ್ನು ಅನುಸರಿಸಿರಿ.” (71:1-3)

ಆದರೆ ವಿಗ್ರಹಾರಾಧಕರಾದ ಆ ಜನತೆ ಅದರಲ್ಲಿಯೇ ದೃಢವಾಗಿ ನಿಂತು ಹೀಗೆ ಘೋಷಿಸಿಬಿಟ್ಟರು: "ನೀವು ಎಷ್ಟು ಮಾತ್ರಕ್ಕೂ ನಿಮ್ಮ ಆರಾಧ್ಯರನ್ನು ತ್ಯಜಿಸಬೇಡಿರಿ. ವದ್ದ್, ಸುವಾಅ್, ಯಗೂಸ್, ಯಊಕ್ ಮತ್ತು ನಸ್ರ್‌ಗಳನ್ನು ಬಿಟಬೇಡಿರಿ."

ಈ ಜನರು ಮೃತಪಟ್ಟ ಸಜ್ಜನರನ್ನು ಸ್ಮರಿಸಲು ಮತ್ತು ಗೌರವಿಸಲು ಅವರ ಮೂರ್ತಿಗಳನ್ನು ನಿರ್ಮಿಸಿದರು. ಕಾಲಾಂತರದಲ್ಲಿ ಅವುಗಳೊಂದಿಗಿರುವ ಗೌರವ ಮಿತಿಮೀರಿ, ಅವರ ಮೂರ್ತಿ ನಿರ್ಮಿಸಲ್ಪಡಲು ಅವರ ದಿವ್ಯತ್ವವೇ ಕಾರಣ ಎಂಬ ವಿಶ್ವಾಸದಿಂದ ಅವುಗಳು ಆರಾಧ್ಯ ವಸ್ತುಗಳಾಗಿ ಮಾರ್ಪಟ್ಟ ಚರಿತ್ರೆ ಇದೆ. ಪ್ರವಾದಿ ನೂಹ್(عليه السلام) ರ ಜನಾಂಗ ಆರಾಧಿಸುತ್ತಿದ್ದ ವದ್ದ್, ಸುವಾಅ್, ಯಗೂಸ್, ಯಊಕ್ ಮತ್ತು ನಸ್ರ್ ಮುಂತಾದ ವಿಗ್ರಹಗಳು ಇದರಲ್ಲಿ ಒಳಪಡುತ್ತವೆ.

**ನಾಯಕರ ರಂಗಪ್ರವೇಶ:**

ಸತ್ಯಸಂದೇಶ ಪ್ರಚಾರದ ಮಾರ್ಗದಲ್ಲಿ ಪ್ರವಾದಿಗಳಿಗೆ ಅಡೆತಡೆ ಉಂಟುಮಾಡುವುದರಲ್ಲಿ ಆ ಪ್ರದೇಶದಲ್ಲಿದ್ದ ನೇತಾರರು ಮತ್ತು ದೇಹೇಚ್ಛೆಗಳನ್ನು ಅನುಸರಿಸುವವರು ಮೊದಲಿಗರಾಗಿದ್ದರು.

﴿وَكَذَٰلِكَ مَآ أَرْسَلْنَا مِن قَبْلِكَ فِى قَرْيَةٍ مِّن
نَّذِيرٍ إِلَّا قَالَ مُتْرَفُوهَآ إِنَّا وَجَدْنَآ ءَابَآءَنَا عَلَىٰٓ
أُمَّةٍ وَإِنَّا عَلَىٰٓ ءَاثَٰرِهِم مُّقْتَدُونَ ﴿٢٣﴾﴾

"ಈ ರೀತಿ ನಿಮಗಿಂತ ಮುಂಚೆ ನಾವು ಎಚ್ಚರಿಕೆ ನೀಡುವವರನ್ನು ಕಳುಹಿಸಿದ ಪ್ರತಿಯೊಂದು ನಾಡಿನಲ್ಲೂ ಅದರ ಅನುಕೂಲಸ್ಥ ಜನರು, ನಮ್ಮ ಪೂರ್ವಜರು ಒಂದು ಪದ್ಧತಿಯಲ್ಲಿದ್ದುದಾಗಿ ನಾವು ಕಂಡಿದ್ದೇವೆ ಮತ್ತು ನಾವು ಅವರ ಹಜ್ಜೆ ಗುರುತುಗಳನ್ನೇ ಅನುಸರಿಸುತ್ತೇವೆ ಎಂದೇ ಹೇಳಿದ್ದರು."

ಪ್ರವಾದಿ ನೂಹ್(عليه السلام) ರ ಜನಾಂಗದ ಸತ್ಯನಿಷೇಧಿಗಳಾದ ಮುಖಂಡರು ಹೇಳಿದರು:

﴿فَقَالَ ٱلْمَلَأُ ٱلَّذِينَ كَفَرُوا۟ مِن قَوْمِهِۦ مَا نَرَىٰكَ
إِلَّا بَشَرًا مِّثْلَنَا وَمَا نَرَىٰكَ ٱتَّبَعَكَ إِلَّا ٱلَّذِينَ
هُمْ أَرَاذِلُنَا بَادِىَ ٱلرَّأْىِ وَمَا نَرَىٰ لَكُمْ عَلَيْنَا
مِن فَضْلٍۭ بَلْ نَظُنُّكُمْ كَٰذِبِينَ ﴿٢٧﴾﴾

"ನೀನು ನಮ್ಮ ದೃಷ್ಟಿಯಲ್ಲಿ ನಮ್ಮಂತಹ ಓರ್ವ ಮಾನವನಾಗಿರುವೇ ವಿನಾ ಇನ್ನೇನೂ ಅಲ್ಲ. ನಮ್ಮ ಜನಾಂಗದಲ್ಲಿ ನೀಚರಾಗಿದ್ದವರು ಮಾತ್ರ ಹಿಂದು ಮುಂದು ನೋಡದೆ ನಿನ್ನನ್ನು ಅನುಸರಿಸುತ್ತಿರುವುದನ್ನು ನಾವು ಕಾಣುತ್ತೇವೆ. ನೀನು ನಮಗಿಂತ ಯಾವ ವಿಷಯದಲ್ಲಿಯೂ ಶ್ರೇಷ್ಠನಾಗಿರುವುದನ್ನು ನಾವು ಕಾಣುವುದಿಲ್ಲ. ಮಾತ್ರವಲ್ಲ, ನಾವು ನಿನ್ನನ್ನು ಸುಳ್ಳುಗಾರರೆಂದು ಭಾವಿಸುತ್ತೇವೆ." (11:27)

ಅವರ ವಾದ ಪ್ರಕಾರ ತಮ್ಮಂತಿರುವ ಮನುಷ್ಯ ಓರ್ವ ದೇವಸಂದೇಶವಾಹಕನಾಗುವುದರಲ್ಲಿ ಅರ್ಥವಿಲ್ಲ. ಬದಲು ಓರ್ವ ಮಲಕ್ ಸಂದೇಶವಾಹಕರಾಗಿ ಆಗಮಿಸಬೇಕಾಗಿತ್ತು. ಪ್ರವಾದಿ ಮುಹಮ್ಮದ್ (ﷺ) ರ ಜನತೆಯಲ್ಲಿಯೂ ಈ ವಾದವಿತ್ತು. ಕುರ್‌ಆನ್ ಹೇಳುತ್ತದೆ:

﴿وَمَا مَنَعَ ٱلنَّاسَ أَن يُؤْمِنُوٓا۟ إِذْ جَآءَهُمُ ٱلْهُدَىٰٓ إِلَّآ
أَن قَالُوٓا۟ أَبَعَثَ ٱللَّهُ بَشَرًا رَّسُولًا ﴿٩٤﴾ قُل لَّوْ كَانَ فِى
ٱلْأَرْضِ مَلَٰٓئِكَةٌ يَمْشُونَ مُطْمَئِنِّينَ لَنَزَّلْنَا
عَلَيْهِم مِّنَ ٱلسَّمَآءِ مَلَكًا رَّسُولًا ﴿٩٥﴾﴾

"ಜನರ ಮುಂದೆ ಸನ್ಮಾರ್ಗದರ್ಶನ ಬಂದಾಗಲೆಲ್ಲ -ಅದರ ಮೇಲೆ ವಿಶ್ವಾಸವಿಡದಂತೆ ಜನರನ್ನು ತಡೆದುದು ಅಲ್ಲಾಹು ಸಂದೇಶವಾಹಕನಾಗಿ ಮಾನವನನ್ನು ಕಳುಹಿಸಿದನೇ? ಎಂಬ ಮಾತೇ ವಿನಾ ಇನ್ನೇನೂ ಅಲ್ಲ. ಭೂಮಿಯ ಮೇಲೆ ದೇವಚರರು ಇಷ್ಟಾನುಸಾರ ನಡೆದಾಡುತ್ತಿದ್ದರೆ ನಾವು ಖಂಡಿತವಾಗಿಯೂ ಆಕಾಶದಿಂದ ಒಬ್ಬ ದೇವಚರನನ್ನೇ ಅವರಿಗೆ ಸಂದೇಶವಾಹಕನನ್ನಾಗಿ ಮಾಡಿ ಕಳುಹಿಸುತ್ತಿದ್ದೆವೆಂದು ಅವರೊಡನೆ ಹೇಳಿರಿ." (17:94-95)

ಉನ್ನತರು ಮತ್ತು ಕೀಳ್ಮಟ್ಟದವರು ಎಂಬ ಉಚ್ಛನೀಚತೆಯ ವಿಚಾರಧಾರೆಯನ್ನಿಟ್ಟುಕೊಂಡ ಮುಖಂಡರ ಮತ್ತೊಂದು ವಾದವೆಂದರೆ, ಪ್ರವಾದಿ ನೂಹ್(عليه السلام) ರನ್ನು ಹಿಂಬಾಲಿಸಿದ್ದು ಕೆಳವರ್ಗದ ಜನರಾಗಿದ್ದರು. ಅವರು ಸಂದೇಶ ಕೇಳಿದಾಕ್ಷಣ ಹಿಂದು ಮುಂದು ನೋಡದೆ ನೂಹರನ್ನು ಅನುಸರಿಸಿದ ಮೂರ್ಖರಾಗಿದ್ದಾರೆನ್ನುವುದು ಅಲ್ಲಿಯ ಮುಖಂಡರ ಅಭಿಪ್ರಾಯವಾಗಿತ್ತು. ಬಹುತೇಕ ಸಂದರ್ಭಗಳಲ್ಲಿ ಸತ್ಯವನ್ನು ಸ್ವೀಕರಿಸಲು ಮೊದಲು ಮುಂದಾಗುವುದು ಸಮಾಜದಲ್ಲಿರುವ ಬಡವರು ಮತ್ತು ದುರ್ಬಲರಾಗಿದ್ದಾರೆ. ಅಹಂಕಾರ ಮತ್ತು ದುರಭಿಮಾನ ಮುಖಂಡರನ್ನು ಅದರಿಂದ ತಡೆಯುತ್ತದೆ. ಪ್ರವಾದಿ

ನೂಹ್(ﷺ) ಮತ್ತು ಅವರ ಮೇಲೆ ವಿಶ್ವಾಸವಿರಿಸಿದ ಜನರಿಗೆ ತಮಗಿಂತ ಯಾವುದೇ ಶ್ರೇಷ್ಠತೆಯಿಲ್ಲ ಎಂದು ಆ ಮುಖಂಡರು ಅವರೊಂದಿಗೆ ಹೇಳಿದರು. ಭೌತಿಕ ಮೇಲ್ಮೆಯನ್ನು ಸನ್ಮಾರ್ಗ ಮತ್ತು ಆತ್ಮಿಕ ಅಭಿವೃದ್ಧಿಯ ಮಾನದಂಡವೆಂದು ಪರಿಗಣಿಸುವವರು ಇಂತಹ ಆಕ್ಷೇಪಗಳನ್ನು ಎತ್ತುವುದು ಸಾಮಾನ್ಯವಾಗಿದೆ. ಅವರು ಹೀಗೆಯೂ ಕೇಳಿದರು:

﴿ قَالُوٓا۟ أَنُؤْمِنُ لَكَ وَٱتَّبَعَكَ ٱلْأَرْذَلُونَ ﴿١١١﴾ ﴾

"ನಾವು ನಿನ್ನನ್ನು ನಂಬಬೇಕೇ? ನಿನ್ನನ್ನು ಅನುಸರಿಸುವವರಂತೂ ಅತ್ಯಂತ ನೀಚರಾಗಿದ್ದಾರೆ." (26:111)

ತಮ್ಮ ಜೊತೆಯಲ್ಲಿರುವ ದುರ್ಬಲರು ಮತ್ತು ಜನಸಾಮಾನ್ಯರನ್ನು ದೂರವಿರಿಸಿದರೆ ಮುಖಂಡರು ತನ್ನ ಮೇಲೆ ವಿಶ್ವಾಸವಿರಿಸುವುದರಿಂದ ತನ್ನ ಸಂದೇಶಪ್ರಚಾರ ಕಾರ್ಯ ಸುಲಭವಾಗುತ್ತದೆಯೆಂದು ನೂಹ್(ﷺ) ರು ಚಿಂತಿಸಲಿಲ್ಲ. ಬದಲಾಗಿ, ಅವರು ಹೀಗೆ ಹೇಳಿದರು:

﴿ وَمَآ أَنَا۠ بِطَارِدِ ٱلْمُؤْمِنِينَ ﴿١١٤﴾ ﴾

"ಸತ್ಯವಿಶ್ವಾಸ ಸ್ವೀಕರಿಸಿದವರನ್ನು ಧಿಕ್ಕರಿಸುವುದು ನನ್ನ ಕೆಲಸವಲ್ಲ." (26:114)

﴿ وَيَٰقَوْمِ مَن يَنصُرُنِى مِنَ ٱللَّهِ إِن
طَرَدتُّهُمْ ۚ أَفَلَا تَذَكَّرُونَ ﴿٣٠﴾ ﴾

"ಓ ನನ್ನ ಜನಾಂಗ ಬಾಂಧವರೇ, ನಾನು ಇವರನ್ನು ಬಹಿಷ್ಕರಿಸಿದರೆ ಅಲ್ಲಾಹನ ಹಿಡಿತದಿಂದ ನನ್ನನ್ನು ಕಾಪಾಡಲು ಯಾರು ಬಂದಾರು? ನಿಮಗೆ ಇಷ್ಟೂ ತಿಳಿಯುವುದಿಲ್ಲವೇ?" (11:30)

ತಮ್ಮ ಮುಂದಾಳುತ್ವ ಮತ್ತು ಅಂಧಕಾರವನ್ನು ಉಳಿಸಿಕೊಳ್ಳುವ ನಿಟ್ಟಿನಲ್ಲಿ ಜಾಗರೂಕರಾಗಿದ್ದ ಅಲ್ಲಿಯ ಧುರೀಣರು ಜನರ ಮನಸ್ಸುಗಳಲ್ಲಿ ಕೆಲವು ಸಂಶಯಗಳನ್ನು ಬಿತ್ತಿದರು.

﴿ فَقَالَ ٱلْمَلَؤُا۟ ٱلَّذِينَ كَفَرُوا۟ مِن قَوْمِهِۦ مَا هَٰذَآ إِلَّا بَشَرٌ
مِّثْلُكُمْ يُرِيدُ أَن يَتَفَضَّلَ عَلَيْكُمْ وَلَوْ شَآءَ ٱللَّهُ لَأَنزَلَ
مَلَٰٓئِكَةً مَّا سَمِعْنَا بِهَٰذَا فِىٓ ءَابَآئِنَا ٱلْأَوَّلِينَ ﴿٢٤﴾ ﴾

"ಸತ್ಯವನ್ನು ನಿಷೇಧಿಸಿದ ಅವರ ಜನಾಂಗದ ಸರದಾರರು ಹೇಳತೊಡಗಿದರು -ಇವನು ನಿಮ್ಮಂತೆಯೇ ಇರುವ ಒಬ್ಬ ಮನುಷ್ಯನಲ್ಲದೆ ಇನ್ನೇನೂ ಅಲ್ಲ. ನಿಮ್ಮ ಮೇಲೆ ಹಿರಿಮೆಯನ್ನು ಗಳಿಸುವುದೇ ಇವನ ಉದ್ದೇಶ. ಅಲ್ಲಾಹನು ಕಳುಹಿಸಲಿಚ್ಛಿಸಿದರೆ ದೇವಚರರನ್ನು ಕಳುಹಿಸುತ್ತಿದ್ದನು. ಇಂತಹ ವಿಷಯವನ್ನು (ಮಾನವರು ಸಂದೇಶವಾಹಕರಾಗಿ ಬಂದರೆಂಬ) ನಾವು ನಮ್ಮ ಪೂರ್ವಿಕರ ಕಾಲದಲ್ಲಿಂದ ಕೇಳಿಯೇ ಇಲ್ಲ." (23:24)

﴿ وَمَآ أَسْـَٔلُكُمْ عَلَيْهِ مِنْ أَجْرٍ ۖ إِنْ أَجْرِىَ إِلَّا عَلَىٰ رَبِّ
ٱلْعَٰلَمِينَ ﴿١٠٩﴾ فَٱتَّقُوا۟ ٱللَّهَ وَأَطِيعُونِ ﴿١١٠﴾ ﴾

ಪ್ರವಾದಿ ನೂಹ್(ﷺ) ರು ತಮ್ಮ ಆತ್ಮಾರ್ಥತೆಯನ್ನು ಪ್ರಕಟಿಸುತ್ತಾ ಹೇಳಿದರು: "ಈ ಕಾರ್ಯಕ್ಕಾಗಿ ನಾನು, ನಿಮ್ಮಿಂದ ಯಾವ ಪ್ರತಿಫಲವನ್ನು ಬಯಸುವುದಿಲ್ಲ. ನನ್ನ ಪ್ರತಿಫಲವು ಸರ್ವಲೋಕಗಳ ಪಾಲಕ ಪ್ರಭುವಿನ ಬಳಿ ಇದೆ. ಆದುದರಿಂದ ನೀವು ಅಲ್ಲಾಹನನ್ನು ಭಯಪಡಿರಿ ಮತ್ತು ನನ್ನನ್ನು ಅನುಸರಿಸಿರಿ." (26:109-110)

## ಸತ್ಯದ ಮನವರಿಕೆಗೆ ಬೌದ್ಧಿಕ ಪ್ರಯತ್ನ:

ಪ್ರವಾದಿ ನೂಹ್(ﷺ) ರು ತಮ್ಮ ಜನಾಂಗದ ಗಮನವನ್ನು ಪ್ರಪಂಚದ ವಾಸ್ತವಿಕತೆಗಳೆಡೆಗೆ ಸೆಳೆಯಲು ಪ್ರಯತ್ನಿಸಿದರು. ಹೀಗಾದರೂ ತನ್ನ ಜನತೆ ಸೃಷ್ಟಿಕರ್ತನ ಮಹತ್ವವನ್ನು ಅರಿತು ಸತ್ಯದ ದಾರಿಗೆ ಬರಲಿ ಎನ್ನುವುದು ಅವರ ಆಸೆಯಾಗಿತ್ತು.

﴿ مَّا لَكُمْ لَا تَرْجُونَ لِلَّهِ وَقَارًا ﴿١٣﴾ وَقَدْ خَلَقَكُمْ أَطْوَارًا ﴿١٤﴾
أَلَمْ تَرَوْا۟ كَيْفَ خَلَقَ ٱللَّهُ سَبْعَ سَمَٰوَٰتٍ طِبَاقًا ﴿١٥﴾ وَجَعَلَ
ٱلْقَمَرَ فِيهِنَّ نُورًا وَجَعَلَ ٱلشَّمْسَ سِرَاجًا ﴿١٦﴾ وَٱللَّهُ أَنۢبَتَكُم
مِّنَ ٱلْأَرْضِ نَبَاتًا ﴿١٧﴾ ثُمَّ يُعِيدُكُمْ فِيهَا وَيُخْرِجُكُمْ إِخْرَاجًا
﴿١٨﴾ وَٱللَّهُ جَعَلَ لَكُمُ ٱلْأَرْضَ بِسَاطًا ﴿١٩﴾ لِّتَسْلُكُوا۟
مِنْهَا سُبُلًا فِجَاجًا ﴿٢٠﴾ قَالَ نُوحٌ رَّبِّ إِنَّهُمْ عَصَوْنِى
وَٱتَّبَعُوا۟ مَن لَّمْ يَزِدْهُ مَالُهُۥ وَوَلَدُهُۥٓ إِلَّا خَسَارًا ﴿٢١﴾ ﴾

"ನೀವು ಅಲ್ಲಾಹನ ಬಗ್ಗೆ ಯಾವುದೇ ಪ್ರತಿಷ್ಠೆಯನ್ನು ನಿರೀಕ್ಷಿಸದಿರಲು ನಿಮಗೇನಾಗಿದೆ? ಅವನಂತೂ ನಿಮ್ಮನ್ನೂ ವಿವಿಧ ಹಂತಗಳಲ್ಲಿ ಸೃಷ್ಟಿಸಿರುವನು. ಅಲ್ಲಾಹನು ಸಪ್ತ ಗಗನಗಳನ್ನು ಅಂತಸ್ತು ಅಂತಸ್ತುಗಳಾಗಿ ಹೇಗೆ ಸೃಷ್ಟಿಸಿದನು? ಅವನು ಚಂದ್ರನನ್ನು ಬೆಳಕಾಗಿಯೂ ಸೂರ್ಯನನ್ನು ದೀಪವಾಗಿಯೂ ಮಾಡಿರುವನು. ಅಲ್ಲಾಹನು ನಿಮ್ಮನ್ನು ಭೂಮಿಯಿಂದ ವಿಚಿತ್ರ ರೀತಿಯಲ್ಲಿ ಬೆಳೆಸಿದನು. ಮುಂದೆ ಅವನು ನಿಮ್ಮನ್ನು ಪುನಃ ಇದೇ ಭೂಮಿಗೆ ಮರಳಿಸುವನು ಮತ್ತು ಇದರಿಂದ ಒಮ್ಮೆಲೇ ನಿಮ್ಮನ್ನು ಹೊರತೆಗೆಯುವನು. ಮತ್ತು ಅಲ್ಲಾಹನು ಭೂಮಿಯನ್ನು ನಿಮಗೆ ಹಾಸುಗೆಯನ್ನಾಗಿ ಮಾಡಿದನು. ನೀವು ಇದರಲ್ಲಿ ವಿಶಾಲವಾದ ಮಾರ್ಗದಲ್ಲಿ ನಡೆಯುವಂತಾಗಲು." (71:13-21)

ಸಕಲ ಕೆಡುಕು ಮತ್ತು ವಿಗ್ರಹಾರಾಧನೆಯಿಂದ ಮುಕ್ತರಾಗಿ ಪ್ರಪಂಚದ ಸೃಷ್ಟಿಕರ್ತನಾದ ಅಲ್ಲಾಹನನ್ನು ಮಾತ್ರ ಆರಾಧಿಸುವ, ಅವನೊಂದಿಗೆ ಮಾತ್ರ ಪ್ರಾರ್ಥಿಸುವ ಜನರಾಗಿ ಮಾರ್ಪಟ್ಟರೆ ಪರಲೋಕಮೋಕ್ಷ ಮಾತ್ರವಲ್ಲದೆ, ಇಹಲೋಕದಲ್ಲಿಯೂ ಅಲ್ಲಾಹನು ನಿಮಗೆ ಅನುಗ್ರಹಗಳನ್ನು ದಯಪಾಲಿಸುತ್ತಾನೆಂದು ನೂಹರು ಅವರೊಂದಿಗೆ ಹೇಳಿದರು:

﴿ فَقُلْتُ ٱسْتَغْفِرُواْ رَبَّكُمْ إِنَّهُۥ كَانَ غَفَّارًا ﴿١٠﴾
يُرْسِلِ ٱلسَّمَآءَ عَلَيْكُم مِّدْرَارًا ﴿١١﴾ وَيُمْدِدْكُم بِأَمْوَٰلٍ
وَبَنِينَ وَيَجْعَل لَّكُمْ جَنَّٰتٍ وَيَجْعَل لَّكُمْ أَنْهَٰرًا ﴿١٢﴾ ﴾

"...ನೀವು ನಿಮ್ಮ ಪ್ರಭುವಿನೊಡನೆ ಕ್ಷಮಾಯಾಚನೆ ಮಾಡಿರಿ. ಖಂಡಿತವಾಗಿಯೂ ಅವನು ಮಹಾ ಕ್ಷಮಾಶೀಲನಾಗಿದ್ದಾನೆ. ಅವನು ನಿಮ್ಮ ಮೇಲೆ ಆಕಾಶದಿಂದ ಧಾರಾಳವಾಗಿ ಮಳೆ ಸುರಿಸುವನು. ನಿಮಗೆ ಸೊತ್ತು ಸಂತಾನಗಳನ್ನು ದಯಪಾಲಿಸುವನು. ನಿಮಗಾಗಿ ಉದ್ಯಾನಗಳನ್ನು ಸೃಷ್ಟಿಸುವನು ಮತ್ತು ನಿಮಗಾಗಿ ಕಾಲುವೆಗಳನ್ನು ಹರಿಸುವನು." (71:10-12)

ಪ್ರವಾದಿ ನೂಹ್(ﷺ) ತ್ಯಾಗ, ಸಹನೆ ಮತ್ತು ಕಳಕಳಿಯಿಂದ ಸುದೀರ್ಘ ಕಾಲ ಸಂದೇಶಪ್ರಚಾರ ನಡೆಸಿದರು. ಆ ಜನತೆ ನಿಷೇಧಾತ್ಮಕ ನಿಲುವಿಗೇ ಬಲವಾಗಿ ಅಂಟಿಕೊಂಡಿತು. ಕುರ್‌ಆನ್ ಹೇಳುತ್ತದೆ:

﴿ قَالَ رَبِّ إِنِّي دَعَوْتُ قَوْمِي لَيْلًا وَنَهَارًا ﴿٥﴾ فَلَمْ يَزِدْهُمْ
دُعَآءِيٓ إِلَّا فِرَارًا ﴿٦﴾ وَإِنِّي كُلَّمَا دَعَوْتُهُمْ لِتَغْفِرَ لَهُمْ
جَعَلُوٓاْ أَصَٰبِعَهُمْ فِيٓ ءَاذَانِهِمْ وَٱسْتَغْشَوْاْ ثِيَابَهُمْ وَأَصَرُّواْ
وَٱسْتَكْبَرُواْ ٱسْتِكْبَارًا ﴿٧﴾ ثُمَّ إِنِّي دَعَوْتُهُمْ جِهَارًا
﴿٨﴾ ثُمَّ إِنِّيٓ أَعْلَنتُ لَهُمْ وَأَسْرَرْتُ لَهُمْ إِسْرَارًا ﴿٩﴾ ﴾

"ಅವರು ಹೀಗೆ ಹೇಳಿದರು: ನನ್ನ ಪ್ರಭೂ, ನಾನು ನನ್ನ ಜನಾಂಗದವರನ್ನು ಹಗಲಿರುಳೆನ್ನದೆ ಕರೆದೆನು. ಆದರೆ ನನ್ನ ಕರೆಯು ಅವರ ಪಲಾಯನವನ್ನು ಮಾತ್ರ ಹೆಚ್ಚಿಸಿತು. ನೀನು ಅವರನ್ನು ಕ್ಷಮಿಸುವಂತಾಗಲೆಂದು ನಾನು ಅವರನ್ನು ಕರೆದಾಗಲೆಲ್ಲ ಅವರು ಕಿವಿಗಳಲ್ಲಿ ಬೆರಳುಗಳನ್ನು ತುರುಕಿಸಿಕೊಂಡರು. ತಮ್ಮ ವಸ್ತ್ರಗಳಿಂದ ಮುಖ ಮುಚ್ಚಿಕೊಂಡರು. ಹಠಮಾರಿತನ ತೋರಿಸಿದರು ಮತ್ತು ಭಾರೀ ಅಹಂಭಾವ ತೋರಿಸಿದರು. ತರುವಾಯ ನಾನು ಅವರಿಗೆ ಬಹಿರಂಗ ಕರೆ ಕೊಟ್ಟೆನು. ಅನಂತರ ರಹಸ್ಯವಾಗಿಯೂ ಉಪದೇಶಿಸಿದೆನು." (71:5-9)

## ಪರಿಹಾಸ್ಯ ಮತ್ತು ಬೆದರಿಕೆಗಳು:

ಆದರೆ, ಜನರು ಕಿವಿಗೊಡಲಿಲ್ಲ. ಸರದಾರರು ಹೇಳಿದರು:

"ಇವನಿಗೆ ಸ್ವಲ್ಪ ಹುಚ್ಚು ಹಿಡಿದಿದೆ. ಸ್ವಲ್ಪ ಕಾಲ ಕಾದು ನೋಡಿರಿ (ಗುಣವಾಗಲೂಬಹುದು)"

ಆಕ್ಷೇಪ ಮತ್ತು ಮತ್ತು ಗೇಲಿ ಮಾತ್ರವಲ್ಲದೆ, ಅವರು ಬೆದರಿಕೆಯನ್ನು ಎದುರಿಸಿದರು.

﴿ قَالُواْ لَئِن لَّمْ تَنتَهِ يَٰنُوحُ لَتَكُونَنَّ
مِنَ ٱلْمَرْجُومِينَ ﴿١١٦﴾ ﴾

"ಅವರು ಹೇಳಿದರು: ನೂಹ್, ನೀನು ಇದನ್ನು ತೊರೆಯದಿದ್ದರೆ ಖಂಡಿತವಾಗಿಯೂ ನೀನು ಕಲ್ಲೆಸೆದು ಕೊಲ್ಲಲ್ಪಡುವವರಲ್ಲಾಗುವೆ." (26:116)

ಅವರು ನಾವು ಸನ್ಮಾರ್ಗದ ವಕ್ತಾರರು ಮತ್ತು ನೂಹರು ದುರ್ಮಾರ್ಗದಲ್ಲಿದ್ದಾರೆಂದು ಹೇಳಿದರು:

﴿ قَالَ ٱلْمَلَأُ مِن قَوْمِهِۦٓ إِنَّا لَنَرَىٰكَ

﴿ فِي ضَلَٰلٖ مُّبِينٖ ٦٠ ﴾

“ಅವರ ಜನಾಂಗದ ಮುಂದಾಳುಗಳು ಹೇಳಿದರು: ನೀವು ಸುವ್ಯಕ್ತ ಪಥಭ್ರಷ್ಟತೆಯಲ್ಲಿ ಸಿಲುಕಿರುವುದನ್ನು ನಾವು ಕಾಣುತ್ತೇವೆ.” (7:60)

﴿ قَالَ يَٰقَوۡمِ لَيۡسَ بِي ضَلَٰلَةٞ وَلَٰكِنِّي رَسُولٞ مِّن رَّبِّ ٱلۡعَٰلَمِينَ ٦١ أُبَلِّغُكُمۡ رِسَٰلَٰتِ رَبِّي وَأَنصَحُ لَكُمۡ وَأَعۡلَمُ مِنَ ٱللَّهِ مَا لَا تَعۡلَمُونَ ٦٢ أَوَعَجِبۡتُمۡ أَن جَآءَكُمۡ ذِكۡرٞ مِّن رَّبِّكُمۡ عَلَىٰ رَجُلٖ مِّنكُمۡ لِيُنذِرَكُمۡ وَلِتَتَّقُواْ وَلَعَلَّكُمۡ تُرۡحَمُونَ ٦٣ ﴾

ನೂಹರು ಹೇಳಿದರು: “ಓ ನನ್ನ ಜನಾಂಗ ಬಾಂಧವರೇ, ನಾನು ಯಾವುದೇ ಪಥಭ್ರಷ್ಟತೆಯಲ್ಲಿ ಸಿಲುಕಿಲ್ಲ. ನಿಜವಾಗಿ ನಾನು ಸರ್ವಲೋಕ ಪಾಲಕನ ಸಂದೇಶವಾಹಕನಾಗಿದ್ದೇನೆ. ನಿಮಗೆ ನನ್ನ ಪ್ರಭುವಿನ ಸಂದೇಶಗಳನ್ನು ತಲುಪಿಸುತ್ತೇನೆ. ನಾನು ನಿಮ್ಮ ಹಿತಚಿಂತಕನಾಗಿದ್ದೇನೆ. ನಿಮಗೆ ತಿಳಿಯದಿರುವುದು ಅಲ್ಲಾಹನ ಕಡೆಯಿಂದ ನನಗೆ ತಿಳಿದಿದೆ. ನಿಮಗೆ ಎಚ್ಚರಿಕೆ ನೀಡಿ ನೀವು ಅನೀತಿಯಿಂದ ರಕ್ಷಿಸುವಂತೆ ಮತ್ತು ನಿಮ್ಮ ಮೇಲೆ ದಯೆ ತೋರುವಂತೆ ನಿಮ್ಮ ಬಳಿಗೆ ನಿಮ್ಮ ಸ್ವಂತ ಜನಾಂಗದ ಓರ್ವ ವ್ಯಕ್ತಿಯ ಮೂಲಕ ನಿಮ್ಮ ಪ್ರಭುವಿನ ಬೋಧನೆ ಬಂದಿರುವ ಬಗ್ಗೆ ನಿಮಗೆ ಆಶ್ಚರ್ಯವಾಗುತ್ತಿದೆಯೇ? (7:61-63)

### ಅಕ್ರಮಿಗಳ ವಿರುದ್ಧ ಪ್ರಾರ್ಥನೆ:

ಪ್ರವಾದಿ ನೂಹ್(عليه السلام) ರು ಸಂದೇಶವನ್ನು ತಲುಪಿಸುವ ತನ್ನ ಹೊಣೆಗಾರಿಕೆಯನ್ನು ಚೆನ್ನಾಗಿ ನಿರ್ವಹಿಸಿದರು. ಕೊನೆಗೆ ಅವರಿಗೆ ತಮ್ಮ ಜನತೆ ಸತ್ಯದ ಮಂಟಪದಲ್ಲಿ ಅಣಿನೆರೆಯುತ್ತದೆ ಎಂಬ ನಿರೀಕ್ಷೆ ಹುಸಿಯಾಯಿತು. ಅಲ್ಲಾಹನು ಅವರನ್ನು ಸಾಂತ್ವನಪಡಿಸುತ್ತಾ ಹೇಳುತ್ತಾನೆ:

﴿ وَأُوحِيَ إِلَىٰ نُوحٍ أَنَّهُۥ لَن يُؤۡمِنَ مِن قَوۡمِكَ إِلَّا مَن قَدۡ ءَامَنَ فَلَا تَبۡتَئِسۡ بِمَا كَانُواْ يَفۡعَلُونَ ٣٦ ﴾

“ನಿಮ್ಮ ಜನಾಂಗದಲ್ಲಿ ವಿಶ್ವಾಸ ಸ್ವೀಕರಿಸುವವರೆಲ್ಲ ಸ್ವೀಕರಿಸಿಯಾಯಿತು. ಇನ್ನಾರೂ ಸ್ವೀಕರಿಸುವವರಿಲ್ಲ. ಅವರ ಕುಕೃತ್ಯಗಳಿಗಾಗಿ ದುಃಖಿಸುವುದನ್ನು ಬಿಟ್ಟುಬಿಡಿರಿ.” (11:36)

ಪ್ರವಾದಿ ನೂಹ್(عليه السلام) ರು ಪ್ರಭುವಿನೊಂದಿಗೆ ಅಭಯ ಕೋರಿದರು: “ನಾನು ಸೋತೆ. ಇನ್ನು ನೀನು ಇವರ ಮೇಲೆ ಪ್ರತೀಕಾರ ತೀರಿಸು.” ಎಂದು ತಮ್ಮ ಪ್ರಭುವನ್ನು ಪ್ರಾರ್ಥಿಸಿದರು.

﴿ قَالَ رَبِّ إِنَّ قَوۡمِي كَذَّبُونِ ١١٧ فَٱفۡتَحۡ بَيۡنِي وَبَيۡنَهُمۡ فَتۡحٗا وَنَجِّنِي وَمَن مَّعِيَ مِنَ ٱلۡمُؤۡمِنِينَ ١١٨ ﴾

“ಅವರು ಹೇಳಿದರು: ನನ್ನ ಪ್ರಭೂ, ನನ್ನ ಜನಾಂಗವು ನನ್ನನ್ನು ಸುಳ್ಳಾಗಿಸಿಬಿಟ್ಟಿತು. ನೀನು ನನ್ನ ಮತ್ತು ಅವರ ನಡುವೆ ನಿರ್ಣಾಯಕ ತೀರ್ಮಾನ ಮಾಡಿಬಿಡು. ನನ್ನನ್ನೂ ನನ್ನೊಂದಿಗಿರುವ ಸತ್ಯವಿಶ್ವಾಸಿಗಳನ್ನೂ ರಕ್ಷಿಸು.” (26:117-118)

ಆ ಪ್ರಾರ್ಥನೆಯನ್ನು ಅಲ್ಲಾಹನು ಸ್ವೀಕರಿಸಿದ. ಮುಂದಿನ ಪೀಳಿಗೆಗೂ ಪಾಠವಾಗುವ ರೀತಿಯ ಒಂದು ಶಿಕ್ಷೆಯನ್ನು ಇಳಿಸಲು ಅಲ್ಲಾಹನು ತೀರ್ಮಾನಿಸಿದ. ಬಂದೆರಗಲಿರುವ ಮಹಾಪ್ರಳಯದ ಶಿಕ್ಷೆಯಿಂದ ಸತ್ಯವಿಶ್ವಾಸಿಗಳು ರಕ್ಷಣೆಹೊಂದಲು ಒಂದು ನಾವೆಯನ್ನು ನಿರ್ಮಿಸುವಂತೆ ಆದೇಶಿಸಿದ.

﴿ وَٱصۡنَعِ ٱلۡفُلۡكَ بِأَعۡيُنِنَا وَوَحۡيِنَا وَلَا تُخَٰطِبۡنِي فِي ٱلَّذِينَ ظَلَمُوٓاْ إِنَّهُم مُّغۡرَقُونَ ٣٧ ﴾

“ನಮ್ಮ ಮೇಲ್ನೋಟದಲ್ಲಿ ನಮ್ಮ ಮಾರ್ಗದರ್ಶನ ಪ್ರಕಾರ ಒಂದು ನಾವೆಯನ್ನು ಕಟ್ಟಲಾರಂಭಿಸಿರಿ. ಅಕ್ರಮಿಗಳ ಪರವಾಗಿ ನಮ್ಮೊಡನೆ ಶಿಫಾರಸು ಮಾಡಬಾರದು. ನಿಶ್ಚಯವಾಗಿಯೂ ಇವರೆಲ್ಲರೂ ಮುಳುಗಿಸಲ್ಪಡುವರು.” (11:37)

ಪ್ರವಾದಿ ನೂಹ್(عليه السلام) ರು ನಾವೆ ನಿರ್ಮಿಸಲು ಆರಂಭಿಸಿದರು. ಅದನ್ನು ನೋಡಿದ ಸರದಾರರು ಪೂರ್ವಾಧಿಕ್ಯ ಗೇಲಿ ಮಾಡಲು ಆರಂಭಿಸಿದರು.

﴿ وَيَصۡنَعُ ٱلۡفُلۡكَ وَكُلَّمَا مَرَّ عَلَيۡهِ مَلَأٞ مِّن قَوۡمِهِۦ سَخِرُواْ مِنۡهُۚ قَالَ إِن تَسۡخَرُواْ مِنَّا فَإِنَّا نَسۡخَرُ مِنكُمۡ كَمَا تَسۡخَرُونَ ٣٨ ﴾

"ನೂಹರು ನಾವೆಯನ್ನು ತಯಾರಿಸುತ್ತಿದ್ದರು. ಅವರ ಜನಾಂಗದ ಸರದಾರರ ಪೈಕಿ ಅವರ ಬಳಿಯಿಂದ ಹಾದು ಹೋಗುತ್ತಿದ್ದವರು ಅವರನ್ನು ಗೇಲಿ ಮಾಡುತ್ತಿದ್ದರು. ನೂಹರು (ಹೀಗೆ) ಹೇಳಿದರು: ನೀವು ನಮ್ಮನ್ನು ಕಂಡು ನಗುತ್ತಿದ್ದರೆ ನಾವೂ ನಿಮ್ಮನ್ನು ಕಂಡು ನಗುತ್ತೇವೆ." (11:38)

### ಶಿಕ್ಷೆ ಬಂದೆರಗಿದಾಗ:

ನೂಹ್(ﷺ) ರನ್ನು ಗೇಲಿ ಮಾಡಿ ನಗುತ್ತಿದ್ದವರಿಗೆ ಪಾರಾಗಲು ಅಸಾಧ್ಯವಾದಂತಹ ಶಿಕ್ಷೆ ಬಂದೆರಗಿತು.

حَتَّىٰٓ إِذَا جَآءَ أَمْرُنَا وَفَارَ ٱلتَّنُّورُ قُلْنَا ٱحْمِلْ فِيهَا مِن
كُلٍّ زَوْجَيْنِ ٱثْنَيْنِ وَأَهْلَكَ إِلَّا مَن سَبَقَ عَلَيْهِ
ٱلْقَوْلُ وَمَنْ ءَامَنَ ۚ وَمَآ ءَامَنَ مَعَهُۥٓ إِلَّا قَلِيلٌ ﴿٤٠﴾

"ನಮ್ಮ ಆಜ್ಞೆ ಬಂದಿತು ಮತ್ತು ಆ ಒರತೆಯು ಉಕ್ಕೇರಿತು. ಆಗ ನಾವು (ಹೀಗೆ) ಹೇಳಿದೆವು: ಪ್ರತಿಯೊಂದು ಜಾತಿಯ ಪ್ರಾಣಿಗಳ ಒಂದೊಂದು ಜೋಡಿಯನ್ನು ನಾವೆಯಲ್ಲಿರಿಸಿಕೊಳ್ಳಿರಿ. ಮೊದಲೇ ಗುರುತಿಸಿದವರ ಹೊರತು. ನಿಮ್ಮ ಕುಟುಂಬದವರನ್ನೂ ಹತ್ತಿಸಿ-ಕೊಳ್ಳಿರಿ; ವಿಶ್ವಾಸವಿರಿಸಿಕೊಂಡವರನ್ನೂ ಕುಳ್ಳಿರಿಸಿಕೊಳ್ಳಿರಿ. ನೂಹರ ಮೇಲೆ ವಿಶ್ವಾಸವಿಟ್ಟಿದ್ದವರು ಕೆಲವೇ ಮಂದಿ ಇದ್ದರು." (11:40)

۞ وَقَالَ ٱرْكَبُوا۟ فِيهَا بِسْمِ ٱللَّهِ مَجْر۪ىٰهَا
وَمُرْسَىٰهَآ ۚ إِنَّ رَبِّى لَغَفُورٌ رَّحِيمٌ ﴿٤١﴾

"ನೂಹರು ಹೇಗೆಂದರು: ಇದರಲ್ಲಿ ಹತ್ತಿಸಿಕೊಳ್ಳಿರಿ. ಇದು ಚಲಿಸುವುದೂ ನಿಲ್ಲುವುದೂ ಅಲ್ಲಾಹನ ನಾಮದಿಂದಲೇ ಆಗಿದೆ. ನನ್ನ ಪ್ರಭು ಅತ್ಯಂತ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ." (11:41)

ಸೂರಾಃ ಹೂದ್‌ನ 40ನೇ ವಚನದಲ್ಲಿ ಪ್ರಸ್ತಾಪಿಸಲ್ಪಟ್ಟ ಶಿಕ್ಷೆಗೆ ಪಾತ್ರರಾಗುವ ಮೊದಲೇ ಗುರುತಿಸಿದವರ ಹೊರತು. ನಿಮ್ಮ ಕುಟುಂಬದವರನ್ನೂ ಹತ್ತಿಸಿಕೊಳ್ಳಿರಿ ಎಂಬ ಮಾತಿನಲ್ಲಿ ಶಿಕ್ಷೆಗೆ ಪಾತ್ರ-ರಾಗುವವರು ಪ್ರವಾದಿ ನೂಹ್(ﷺ) ರ ಪತ್ನಿ ಮತ್ತು ಪುತ್ರನಾಗಿದ್ದನು.

وَهِىَ تَجْرِى بِهِمْ فِى مَوْجٍ كَٱلْجِبَالِ وَنَادَىٰ
نُوحٌ ٱبْنَهُۥ وَكَانَ فِى مَعْزِلٍ يَٰبُنَىَّ ٱرْكَب
مَّعَنَا وَلَا تَكُن مَّعَ ٱلْكَٰفِرِينَ ﴿٤٢﴾ قَالَ سَـَٔاوِىٓ
إِلَىٰ جَبَلٍ يَعْصِمُنِى مِنَ ٱلْمَآءِ ۚ قَالَ لَا عَاصِمَ
ٱلْيَوْمَ مِنْ أَمْرِ ٱللَّهِ إِلَّا مَن رَّحِمَ ۚ وَحَالَ بَيْنَهُمَا
ٱلْمَوْجُ فَكَانَ مِنَ ٱلْمُغْرَقِينَ ﴿٤٣﴾

"ನಾವೆಯು ಇವರನ್ನೆತ್ತಿಕೊಂಡು ಚಲಿಸುತ್ತಿತ್ತು. ಒಂದೊಂದೇ ಅಲೆ ಪರ್ವತದಂತೆ ಏರಿ ಬರುತ್ತಿತ್ತು. ನೂಹರ ಮಗನು ದೂರದಲ್ಲಿದ್ದನು. ನೂಹರು ಕೂಗಿ ಕರೆದು ಹೀಗೆಂದರು: ಮಗನೇ, ನಮ್ಮ ಸಂಗಡ ಹತ್ತಿಕೋ, ಸತ್ಯನಿಷೇಧಿಗಳೊಂದಿಗಿರಬೇಡ." ಅವನು (ಮಗ) ಪ್ರತ್ಯುತ್ತರ ಕೊಟ್ಟನು: "ನಾನೀಗಲೇ ಒಂದು ಪರ್ವತದ ಮೇಲೆ ಹತ್ತಿಕೊಳ್ಳುತ್ತೇನೆ. ಅದು ನನ್ನನ್ನು ನೀರಿನಿಂದ ರಕ್ಷಿಸುವುದು. ಆಗ ನೂಹರು, ಅಲ್ಲಾಹನು ಯಾರ ಮೇಲಾದರೂ ಕರುಣೆ ತೋರುವ ಹೊರತು ಇಂದು ಯಾವುದೂ ಅವನ ಆಜ್ಞೆಯಿಂದ ರಕ್ಷಸಲಾರದು ಎಂದರು. ಅಷ್ಟರಲ್ಲಿ ಒಂದು ಅಲೆಯು ಅವರಿಬ್ಬರ ನಡುವೆ ಅಡ್ಡ ಬಂದು ಅವನು ಮುಳುಗಿದವರಲ್ಲಿ ಸೇರಿಬಿಟ್ಟನು." (11:42-43)

ಪವಿತ್ರ ಕುರ್‌ಆನ್ ಪ್ರವಾದಿ ನೂಹ್(ﷺ) ರ ಪತ್ನಿಯನ್ನು ಸತ್ಯನಿ-ಷೇಧಿಗಳಿಗೆ ಉದಾಹರಣೆಯಾಗಿ ಮುಂದಿರಿಸುತ್ತದೆ. ಅಲ್ಲಾಹನು ನಿಯುಕ್ತಗೊಳಿಸಿ ಸಂದೇಶವಾಹಕರ ಪತ್ನಿಯಾಗಿದ್ದರೂ ಕೂಡ! ಅವರ ಮಗನಾದರೋ ಕಣ್ಮುಂದೆಯೇ ಮುಳುಗಿ ಸಾಯುತ್ತಾನೆ!

### ಆದರ್ಶದ ಸಂಬಂಧವೇ ಶಾಶ್ವತ:

ಸತ್ಯವಿಶ್ವಾಸ ಮತ್ತು ಅದರ ಬುನಾದಿಯಲ್ಲಿರುವ ಸತ್ಕರ್ಮಗಳೇ ಅಂತಿಮವಾಗಿ ರಕ್ಷಣೆಯ ಮಾರ್ಗವಾಗಿದೆ. ಇದರ ಹೊರತಾಗಿ ಅದೆಷ್ಟು ಸಜ್ಜನ ವ್ಯಕ್ತಿಯ ರಕ್ತಸಂಬಂಧದಲ್ಲಿ ಒಳಪಟ್ಟಿದ್ದರೂ ಅದರ ಹೆಸರಲ್ಲಿ ಅಲ್ಲಾಹನು ಪ್ರತ್ಯೇಕ ಪರಿಗಣನೆ ನೀಡುವುದಿಲ್ಲವೆಂದು ಈ ಘಟನೆಯಿಂದ ಸ್ಪಷ್ಟವಾಗುತ್ತದೆ.

ನೀರು ಇಳಿದು ನಾವೆಯು ಒಂದು ಪರ್ವತದಲ್ಲಿ ತಂಗಿದಾಗ ಪ್ರವಾದಿ ನೂಹ್(ﷺ) ರು ತಮ್ಮ ಪ್ರಭುವನ್ನು ಕೂಗಿ ಕರೆದು ಹೇಳಿದರು: "...ಪ್ರಭೂ ನನ್ನ ಮಗನು ನನ್ನ ಕುಟುಂಬದವನಾಗಿದ್ದಾನೆ. ನಿನ್ನ ವಾಗ್ದಾನವು ಸತ್ಯ ಮತ್ತು ನೀನು ಎಲ್ಲ ಅಧಿಪತಿಗಳ ಅಧಿಪತಿಯಾ-ಗಿರುತ್ತಿ." (11:45)

*49 ನೇ ಪುಟಕ್ಕೆ*

ಜೀವನದ ಸವಿ

ಅನುಭವಿಸಿರಿ

# ರಹಸ್ಯವಾದ ಇಬಾದತ್ (ಆರಾಧನೆ)

ಡಾ. ಮುಹಮ್ಮದ್ ಅಬ್ದುರ್ರಹ್ಮಾನ್ ಅರೀಫಿ

ಹತ್ತು ವರ್ಷಗಳು ಕಳೆದವು. ವಸಂತ ಋತು. ಒಂದು ತಂಪಾದ ರಾತ್ರಿಯಲ್ಲಿ ಮಿತ್ರರೊಂದಿಗೆ ಪ್ರವಾಸದಲ್ಲಿದ್ದೆ. ನಮ್ಮ ಒಂದು ವಾಹನ ಕೆಟ್ಟಿತ್ತು. ಇದರಿಂದಾಗಿ ನಮಗೆ ಅಸಹಾಯಕರಾಗಿ ನಿರ್ಜನ ಪ್ರದೇಶ-ದಲ್ಲಿ ತೆರೆದ ಆಕಾಶದ ಕೆಳಗೆ ರಾತ್ರಿ ಕಳೆಯುವುದು ಅನಿವಾರ್ಯವಾ-ಯಿತು. ನನಗೆ ಚೆನ್ನಾಗಿ ನೆನಪಿದೆ. ನಾವು ಚಳಿಯಿಂದ ರಕ್ಷಿಸಿಕೊಳ್ಳಲು ಬೆಂಕಿ ಹಾಕಿದ್ದೆವು. ರಾತ್ರಿ ಸರಿದು ಹೋಗುವ ತನಕವೂ ಅದರ ಸುತ್ತ ಜಮಾಯಿಸಿಕೊಂಡು ಹರಟೆ ಹೊಡೆಯುತ್ತಾ ಕಾಲಕಳೆದೆವು. ರಾತ್ರಿ ಇನ್ನೇನು ಸರಿದು ಹೋಗುತ್ತದೆ ಎನ್ನುವಷ್ಟರಲ್ಲಿ ನಮ್ಮ ಪೈಕಿ ಒಬ್ಬ ಕಣ್ಮರೆಯಾದರು. ಅವರು ಉತ್ತಮ ವ್ಯಕ್ತಿಯಾಗಿದ್ದರು. ರಹಸ್ಯವಾಗಿ ಇಬಾದತ್ ನಿರ್ವಹಿಸುತ್ತಿದ್ದರು. ಶುಕ್ರವಾರ ಪೂರ್ವಾಹ್ನವೇ ಜುಮಾ ನಿರ್ವಹಿಸಲು ಹೊರಟು ಹೋಗುವುದನ್ನು ನಾನು ಬಹಳ ಸಲ ಕಂಡಿದ್ದೇನೆ. ಮಸೀದಿಯ ಬಾಗಿಲು ತೆರೆಯುವ ಮೊದಲೇ ಅವರಲ್ಲಿ ಹಾಜರಿರುತ್ತಿದ್ದರು.

ಅವರು ಕಣ್ಮರೆಯಾದಾಗ ಕೈಯಲ್ಲಿ ನೀರಿನ ಬಾಟ್ಲಿಯನ್ನು ಹಿಡಿದುಕೊಂಡು ಹೋಗಿದ್ದರು. ನಾವು ಅವರು ಮೂತ್ರ ವಿಸರ್ಜನೆಗೆ ಹೋಗಿರಬಹುದೆಂದು ಭಾವಿಸಿದೆವು. ಹೊತ್ತಾದರೂ ಅವರು ಮರಳದೇ ಇದ್ದಾಗ ನಾನು ಅವರನ್ನು ಹುಡುಕಿಕೊಂಡು ಹೋದೆ. ನೋಡುವುದೇನು? ಅವರು ತನ್ನ ಸಹವರ್ತಿಗಳಿಂದ ದೂರ ಒಂಟಿಯಾಗಿ ರಾತ್ರಿಯ ಕತ್ತಲಲ್ಲಿ ದೇಹವನ್ನು ದಪ್ಪ ಕಂಬಳಿಯಲ್ಲಿ ಹೊದ್ದುಕೊಂಡು ನಗ್ನ ಭೂಮಿಯ ಮೇಲೆ ಹಣೆಯಿಟ್ಟು ತನ್ನ ಸಂರಕ್ಷ-ಕನಿಗೆ ವಿಧೇಯತೆ ಸೂಚಿಸುತ್ತಿದ್ದರು. ಕೃತಜ್ಞತೆ ಹೇಳುತ್ತಿದ್ದರು. ಅವರು ಅಲ್ಲಾಹುವನ್ನು ಪ್ರೀತಿಸುತ್ತಾರೆನ್ನುವುದು ಸ್ಪಷ್ಟವಾಗಿ ಗೋಚರಿಸು-ತ್ತಿತ್ತು. ಅಲ್ಲಾಹು ಕೂಡಾ ಅವರನ್ನು ಪ್ರೀತಿಸುತ್ತಾನೇನೋ? ಈ ರಹಸ್ಯ ಇಬಾದತ್‌ಗೆ ಪರಲೋಕದಲ್ಲಂತೂ ಅಪಾರ ಪ್ರತಿಫಲ ಇದ್ದೇ ಇದೆ. ಇಹಲೋಕದಲ್ಲಿ ಅದಕ್ಕೆ ಲಭಿಸುವ ಗೌರವ, ಪುಣ್ಯ ಮತ್ತು ಪ್ರಯೋಜನ ಊಹಿಸಲೂ ಅಸಾಧ್ಯ. ವರ್ಷಗಳು ಕಳೆದವು. ನಾನು ಇಂದು ನನ್ನ ಆ ಸಹಪಾಠಿಯನ್ನು ಬಲ್ಲೆನು. ಅಲ್ಲಾಹನು ಅವರಿಗೆ ಭೂಮಿಯಲ್ಲೇ ಸ್ವೀಕೃತಿಯನ್ನು ನೀಡಿದಂತಿದೆ. ಇಂದು ಅವರು ಇಸ್ಲಾಮಿನ ಓರ್ವ ಬಹಳ ದೊಡ್ಡ ದಾಯಿ ಆಗಿರುತ್ತಾರೆ. ಜನರು ಅವರಿಂದ ಸನ್ಮಾರ್ಗದಲ್ಲಿ ಅಣಿ ನೆರೆಯುತ್ತಾರೆ. ಅವರು ಮಾರುಕಟ್ಟೆಗೆ ಹೋಗಲಿ, ಮಸೀದಿಗೆ ಹೋಗಲಿ, ಸಣ್ಣ ಮಕ್ಕಳು ಕೂಡ ಓಡಿ ಬಂದು ಅವರ ಕೈ ಕುಲುಕುತ್ತಾರೆ. ಹಿರಿಯರು ಇವರಿಗೆ ಪ್ರೀತಿ ಮತ್ತು ಅಭಿಮಾನ ಸೂಚಿಸುತ್ತಾರೆ. ಎಷ್ಟೋ ವ್ಯಾಪಾರಿಗಳು. ಜನನಾಯಕರು, ಶ್ರೀಮಂತರು ಅಥವಾ ಸಾಧಕರು ಇಂದೂ ಈ ಯುವಕನಂತೆ ಜನರ ಹೃದಯದಲ್ಲಿ ಸ್ಥಾನ ಗಿಟ್ಟಿಸಿಕೊಳ್ಳಲು ಬಯಸುತ್ತಿದ್ದಾರೆ. ಆದರೆ ಅವರ ಆ ಇಚ್ಛೆ ಸಫಲವಾಗಿಲ್ಲ.

ಒಬ್ಬ ಜ್ಞಾನಿ ತನ್ನ ಲೇಖನದಲ್ಲಿ ಬರೆಯುತ್ತಾರೆ:

"ನಾನು ರಾತ್ರಿಯನ್ನು ಎಚ್ಚರದಿಂದ ಕಳೆಯುತ್ತೇನೆ. ನೀನು ನಿದ್ರಿಸುತ್ತಾ ಕಳೆ. ಬಳಿಕ ನಿನ್ನಲ್ಲಿ ಆಗ್ರಹ ಉಂಟಾಗುವುದು ನನ್ನ ಸ್ಥಾನಮಾನವನ್ನು ಸಂಪಾದಿಸಬೇಕೆಂದು."

ಕುರ್‌ಆನಿನಲ್ಲಿದೆ:

﴿إِنَّ ٱلَّذِينَ ءَامَنُوا۟ وَعَمِلُوا۟ ٱلصَّٰلِحَٰتِ
سَيَجْعَلُ لَهُمُ ٱلرَّحْمَٰنُ وُدًّا ﴿٩٦﴾﴾

“ನಿಸ್ಸಂದೇಹವಾಗಿಯೂ ಯಾರು ಸತ್ಯವಿಶ್ವಾಸ ಸ್ವೀಕರಿಸಿಕೊಂಡು ಸತ್ಕರ್ಮಗಳನ್ನು ಪ್ರವರ್ತಿಸುತ್ತಾರೋ ಪರಮ ದಯಾಮಯನಾದ ಅಲ್ಲಾಹು ಬಹುಬೇಗನೇ (ಜನರ ಹೃದಯದಲ್ಲಿ) ಇವರ ಕುರಿತು ಪ್ರೀತಿ ಉಂಟು ಮಾಡುತ್ತಾನೆ.” (19:96)

ಅಲ್ಲಾಹನು ಯಾರನ್ನು ಪ್ರೀತಿಸುತ್ತಾನೋ ಅವನಿಗಾಗಿ ಭೂಮಿಯಲ್ಲಿ ಸ್ವೀಕೃತಿಯ ದ್ವಾರಗಳನ್ನು ತೆರೆದು ಕೊಡುತ್ತಾನೆನ್ನುವುದು ಸುಳ್ಳಲ್ಲ.

ಪ್ರವಾದಿ(ﷺ) ಯವರು ಹೇಳಿದರು: “ಅಲ್ಲಾಹು ಒಬ್ಬ ವ್ಯಕ್ತಿಯನ್ನು ಇಷ್ಟಪಡುವುದಾದರೆ ಜಿಬ್ರೀಲ್(ﷺ) ರನ್ನು ಕರೆದು ನಾನು ಇಂತಹಾ ವ್ಯಕ್ತಿಯನ್ನು ಪ್ರೀತಿಸುತ್ತೇನೆ. ನೀವು ಕೂಡಾ ಅವನನ್ನು ಪ್ರೀತಿಸಿರಿ ಎಂದು ಹೇಳುತ್ತಾನೆ. ಜಿಬ್ರೀಲ್(ﷺ) ಆ ವ್ಯಕ್ತಿಯನ್ನು ಪ್ರೀತಿಸುವುದರೊಂದಿಗೆ ಆಕಾಶದವರಲ್ಲಿ ಅಲ್ಲಾಹು ಇಂತಹಾ ವ್ಯಕ್ತಿಯನ್ನು ಪ್ರೀತಿಸುತ್ತಾನೆ. ನೀವು ಕೂಡಾ ಅವನನ್ನು ಪ್ರೀತಿಸಿರಿ ಎಂದು ಕೂಗಿ ಹೇಳುತ್ತಾರೆ. ಬಳಿಕ ಆಕಾಶದವರೆಲ್ಲರೂ ಇವನನ್ನು ಪ್ರೀತಿಸತೊಡಗುತ್ತಾರೆ. ಬಳಿಕ ಆ ವ್ಯಕ್ತಿಗಾಗಿ ಭೂಮಿಯವರಲ್ಲಿ ಪ್ರೀತಿ ಇಳಿಸಿಕೊಡಲಾಗುತ್ತದೆ.” (ಸಹೀಹ್ ಬುಖಾರಿ 6040, ಸಹೀಹ್ ಮುಸ್ಲಿಂ 2637)

ಅಲ್ಲಾಹನ ವಚನದ ತಾತ್ಪರ್ಯವೂ ಇದೇ ಆಗಿರುತ್ತದೆ.

﴿إِنَّ ٱلَّذِينَ ءَامَنُواْ وَعَمِلُواْ ٱلصَّٰلِحَٰتِ سَيَجۡعَلُ لَهُمُ ٱلرَّحۡمَٰنُ وُدّٗا ٩٦﴾

“ನಿಸ್ಸಂದೇಹವಾಗಿಯೂ ಯಾರು ಸತ್ಯವಿಶ್ವಾಸ ಸ್ವೀಕರಿಸಿಕೊಂಡು ಸತ್ಕರ್ಮಗಳನ್ನು ಪ್ರವರ್ತಿಸುತ್ತಾರೋ ಪರಮ ದಯಾಮಯನಾದ ಅಲ್ಲಾಹು ಬಹುಬೇಗನೇ (ಜನರ ಹೃದಯಗಳಲ್ಲಿ) ಅವರ ಕುರಿತು ಪ್ರೀತಿ ಉಂಟು ಮಾಡುವನು.” (19:96)

ಅಲ್ಲಾಹು ಒಬ್ಬನ ಕುರಿತು ಕ್ರೋಧಗೊಂಡರೆ ಜಿಬ್ರೀಲ್(ﷺ) ರನ್ನು ಕರೆದು ನಾನು ಇಂತಹಾ ವ್ಯಕ್ತಿಯ ಕುರಿತು ಕ್ರೋಧಗೊಂಡಿದ್ದು ನೀವೂ ಅವನ ಮೇಲೆ ಕ್ರೋಧ ವ್ಯಕ್ತಪಡಿಸಿರೆಂದು ಹೇಳುವನು. ಜಿಬ್ರೀಲ್(ﷺ) ಅವನ ಕುರಿತು ಕ್ರೋಧಗೊಳ್ಳುವರಲ್ಲದೆ ಆಕಾಶದವರೆಲ್ಲರಿಗೂ ಅಲ್ಲಾಹು ಇಂತಹಾ ವ್ಯಕ್ತಿಯಿಂದ ಕ್ರೋಧಗೊಂಡಿದ್ದು ನೀವೂ ಅವನ ಮೇಲೆ ಕ್ರೋಧ ವ್ಯಕ್ತಪಡಿಸಬೇಕೆಂದು ಹೇಳುವರು. ಆ ಪ್ರಕಾರ ಆಕಾಶದವರೆಲ್ಲರೂ ಅವನಿಂದ ಕ್ರೋಧಗೊಳ್ಳುವರು. ಬಳಿಕ ಆ ವ್ಯಕ್ತಿಯ ಕುರಿತು ಭೂಮಿಯಲ್ಲೂ ಕ್ರೋಧ ಉಂಟುಮಾಡಲಾಗುವುದು.

ಸುಬ್‌ಹಾನಲ್ಲಾಹ್! ಭೂಮಿಯಲ್ಲಿ ನಡೆದಾಡುವ, ತಿಂದುಂಡು ತೇಗುವ ಹುಳು ಮಾನವನ ಬಗ್ಗೆ ಅಲ್ಲಾಹು ಆಕಾಶದಲ್ಲಿ ಪ್ರಸ್ತಾವಿಸಿ ಪ್ರೀತಿ ಘೋಷಿಸುವ ಆ ಕಲ್ಪನೆ ಎಷ್ಟೊಂದು ಆಹ್ಲಾದಕರವಾಗಿದೆ ಅಲ್ಲವೇ?

“ನಾನು ಇಂತಹಾ ವ್ಯಕ್ತಿಯನ್ನು ಪ್ರೀತಿಸುತ್ತೇನೆ. ನೀವೂ ಅವನನ್ನು ಪ್ರೀತಿಸಿರಿ!!!”

ಅಗ್ರಗಣ್ಯರಲ್ಲಿ ಓರ್ವರಾದ ಸ್ವಹಾಬಿ ಝುಬೈರ್ ಬಿನ್ ಅವಾಮ್(ﷺ) ಹೇಳುತ್ತಿದ್ದರು. “ನಿಮಗೆ ನಿಮ್ಮ ಸತ್ಕಾರ್ಯಗಳನ್ನು ರಹಸ್ಯವಾಗಿಡಲು ಸಾಧ್ಯವಿದ್ದರೆ ಹಾಗೆ ಮಾಡಿರಿ.” ಉದಾ. ರಾತ್ರಿ ತಪ್ಪದೆ ನಮಾಝ್ ನಿರ್ವಹಿಸುವುದು. ಅದು ವಿತರ್‌ನ ಒಂದು ರಕಅತ್ ಆದರೂ ಸರಿ.

ಪ್ರವಾದಿ(ﷺ) ಯವರು ಹೇಳುತ್ತಾರೆ:

«إِنَّ اللَّـهَ وِتْـرٌ يُحِـبُّ الْوِتْـرَ. فَأَوْتِـرُوا يَـا أَهْـلَ الْقُـرْآنِ».

“ಅಲ್ಲಾಹು (ಏಕೈಕ, ಒಂಟಿ) ವಿತರ್ ಆಗಿದ್ದು ಅವನು ವಿತರ್ ಇಷ್ಟಪಡುತ್ತಾನೆ. ಆದ್ದರಿಂದ ಓ ಕುರ್‌ಆನಿನ ಜನರೇ ವಿತರ್ ನಿರ್ವಹಿಸುತ್ತಾ ಇರಿ.” (ಸುನನು ಅಬೂದಾವೂದ್ 1416)

ಜನರ ನಡುವೆ ಸಂಧಾನ ಮಾಡುವ ಕಾರ್ಯವೂ ರಹಸ್ಯ ಇಬಾದತ್‌ನಲ್ಲಿ ಒಳಪಡುವ ಒಂದು ಕಾರ್ಯವಾಗಿದೆ. ಪರಸ್ಪರ ಬೇರ್ಪಟ್ಟ ಇಬ್ಬರು ಮಿತ್ರರನ್ನು ಸೇರಿಸುವುದು, ನೆರೆಹೊರೆಯವರನ್ನು ನಿಕಟಗೊಳಿಸುವುದು, ಪರಸ್ಪರ ಮುನಿಸಿಕೊಂಡ ಪತಿ-ಪತ್ನಿಯಲ್ಲಿ ಮತ್ತೆ ಪ್ರೀತಿ ವಿಶ್ವಾಸದ ಮೊಗ್ಗೆ ಅರಳುವಂತೆ ಮಾಡುವುದು ಬಹಳ ಶ್ರೇಷ್ಠವಾದ ಕಾರ್ಯಗಳಾಗಿವೆ.

ಪ್ರವಾದಿ(ﷺ) ಯವರು ಹೇಳಿದರು: “ನಾನು ನಿಮಗೆ ನಮಾಝ್, ಉಪವಾಸ ಮತ್ತು ದಾನಧರ್ಮಗಳಿಗಿಂತಲೂ ಶ್ರೇಷ್ಠವಾದ ಕಾರ್ಯವನ್ನು ತಿಳಿಸಿಕೊಡಲೇ?” ಸಹಾಬಿಗಳು ಹೇಳಿದರು: “ಅವಶ್ಯವಾಗಿಯೂ ತಿಳಿಸಿಕೊಡಿರಿ.” ಪ್ರವಾದಿ(ﷺ) ಯವರು ಹೇಳಿದರು: “ಪರಸ್ಪರ ಸಂಧಾನ ಮಾಡಿಕೊಳ್ಳಿರಿ.” ಬಳಿಕ ಪ್ರವಾದಿ(ﷺ) ಯವರು ಹೇಳಿದರು: “ಪರಸ್ಪರ ದ್ವೇಷ ಬಿತ್ತುವುದು ಧರ್ಮವನ್ನು ವಿಕೃತಗೊಳಿಸುವ ಕಾರ್ಯವಾಗಿದೆ.” (ಸುನನು ಅಬೂದಾವೂದ್ 4919)

ನಿರಂತರ ಅಲ್ಲಾಹನನ್ನು ಸ್ಮರಿಸುವುದು ಕೂಡಾ ಒಂದು ರಹಸ್ಯವಾದ

ಇಬಾದತ್ ಆಗಿದೆ. ಸಾಮಾನ್ಯವಾಗಿ ಒಬ್ಬ ವ್ಯಕ್ತಿ ಯಾರನ್ನಾದರೂ ಪ್ರೀತಿಸುವುದಾದರೆ ಅವನು ಸದಾ ಅವನ ಪ್ರೀತಿಯನ್ನು ಸ್ಮರಿಸುತ್ತಿರುತ್ತಾನೆ.

ಪ್ರವಾದಿ(ﷺ) ಯವರು ಹೇಳುತ್ತಾರೆ: "ಅಲ್ಲಾಹನ ಬಳಿ ಅತ್ಯಂತ ಪವಿತ್ರವಾದ ಮತ್ತು ಪದವಿಯನ್ನು ಉನ್ನತಗೊಳಿಸುವಂತಹಾ ಒಂದು ಸತ್ಕಾರ್ಯವನ್ನು ನಾನು ನಿಮಗೆ ತಿಳಿಸಿಕೊಡಲೇ? ಇದು ನೀವು ಚಿನ್ನ ಬೆಳ್ಳಿಯನ್ನು ದಾನ ನೀಡುವುದಕ್ಕಿಂತಲೂ ಶ್ರೇಷ್ಠವಾದ, ಶತ್ರುಗಳೊಂದಿಗೆ ಹೋರಾಡುವುದಕ್ಕಿಂತಲೂ ಉನ್ನತವಾದ ಕಾರ್ಯವಾಗಿದೆ." ಸಹಾಬಿಗಳು ಹೇಳಿದರು. "ಅಲ್ಲಾಹನ ಸಂದೇಶವಾಹಕರೇ! ಅದೇನೆಂದು ನಮಗೆ ಅವಶ್ಯವಾಗಿ ಹೇಳಿಕೊಡಿರಿ." ಪ್ರವಾದಿ(ﷺ) ಯವರು ಹೇಳಿದರು: "ಸರ್ವಶಕ್ತನಾದ ಅಲ್ಲಾಹುವಿನ ಸ್ಮರಣೆ."

ರಹಸ್ಯವಾದ ಇಬಾದತ್‌ನಲ್ಲಿ ಒಳಪಡುವ ಇನ್ನೊಂದು ಶ್ರೇಷ್ಠಕಾರ್ಯ ರಹಸ್ಯವಾಗಿ ದಾನ ನೀಡುವುದು. ರಹಸ್ಯವಾಗಿ ದಾನ ನೀಡುವುದರಿಂದ ಅಲ್ಲಾಹನ ಕೋಪ ತಣಿಯುವುದು. ಅಬೂಬಕರ್(ؓ) ಫಜ್ರ್ ನಮಾಝಿನ ನಂತರ ವಾಯು ವಿಹಾರಕ್ಕೆ ಹೋಗುವುದನ್ನು ಅಭ್ಯಾಸ ಮಾಡಿಕೊಂಡಿದ್ದರು. ಸ್ವಲ್ಪ ಸಮಯ ಕಳೆದು ಅವರು ಮರಳಿ ಬರುತ್ತಿದ್ದರು. ಉಮರ್(ؓ) ರವರಿಗೆ ಅಬೂಬಕರ್(ؓ) ರವರ ಈ ಕಾರ್ಯದ ಕುರಿತು ಕುತೂಹಲ ಉಂಟಾಯಿತು. ಅವರು ಒಂದು ದಿನ ಅಬೂಬಕರ್(ؓ) ರನ್ನು ಹಿಂಬಾಲಿಸಿದರು. ಅಬೂಬಕರ್(ؓ) ಎಂದಿನಂತೆ ನಡೆದು ಒಂದು ಹಳೆಯದಾದ ಡೇರೆಯ ಒಳಗೆ ಪ್ರವೇಶಿಸಿದರು. ಉಮರ್(ؓ) ಕುತೂಹಲದಿಂದ ಒಂದು ಬಂಡೆಯ ಮರೆಯಲ್ಲಿ ನಿಂತು ನೋಡತೊಡಗಿದರು. ಸ್ವಲ್ಪ ಸಮಯದ ನಂತರ ಅಬೂಬಕರ್(ؓ) ಡೇರೆಯಿಂದ ಹೊರಬಂದು ಮದೀನದ ಕಡೆ ನಡೆದರು. ಈಗ ಉಮರ್(ؓ) ಬಂಡೆಯ ಮರೆಯಿಂದ ಸರಿದು ಬಂದು ಡೇರೆಯ ಒಳಗೆ ಪ್ರವೇಶಿಸಿದರು. ಅಲ್ಲಿ ನೋಡುವುದೇನು? ಒಂದು ದುರ್ಬಲರಾದ ಕುರುಡಿ ಮತ್ತು ಅವಳ ಸಣ್ಣ ಸಣ್ಣ ಮಕ್ಕಳು ಕುಳಿತಿದ್ದರು. ಉಮರ್(ؓ) ಕೇಳಿದರು. "ಈ ಬಂದು ಹೋದ ಆ ವ್ಯಕ್ತಿ ಯಾರು?" ಕುರುಡಿ ಉತ್ತರಿಸಿದರು "ನಮಗೆ ಅವರು ಯಾರೆಂದೇ ತಿಳಿಯದು. ಯಾರೋ ಮುಸಲ್ಮಾನರಿರಬೇಕು. ಬಹಳ ಕಾಲದಿಂದ ಪ್ರತಿದಿನ ಬೆಳಿಗ್ಗೆ ನಮ್ಮ ಬಳಿಗೆ ಬರುತ್ತಾರೆ." ಉಮರ್(ؓ) ಕೇಳಿದರು "ಅವರು ಇಲ್ಲಿ ಬಂದು ಏನು ಮಾಡುತ್ತಾರೆ?" ಕುರುಡಿ ಹೇಳಿದರು: "ಮನೆ ಗುಡಿಸುತ್ತಾರೆ. ಹಿಟ್ಟು ನಾದಿ ಇಡುತ್ತಾರೆ. ನಮ್ಮ ಕುರಿಗಳಿಂದ ಹಾಲು ಸೇದಿಕೊಟ್ಟು ಹೋಗುತ್ತಾರೆ."

ಈ ಮಾತನ್ನು ಕೇಳಿ ಸ್ಥಬ್ದರಾದ ಉಮರ್(ؓ) ತನ್ನಷ್ಟಕ್ಕೇ "ಅಬೂಬಕರ್! ನೀವು ನಿಮ್ಮ ನಂತರದವರನ್ನು ಬಹಳ ಸಂಕಷ್ಟಕ್ಕೆ ಸಿಲುಕಿಸುತ್ತೀರಿ" ಎನ್ನುತ್ತಾ ಮದೀನದ ದಾರಿ ಹಿಡಿದರು.

ಉಮರ್(ؓ) ರವರು ಕೂಡ ರಹಸ್ಯವಾದ ಇಬಾದತ್‌ನ ಕಾರ್ಯದಲ್ಲಿ ಅಬೂಬಕರ್(ؓ) ರವರಿಗಿಂತ ಹಿಂದೇನೂ ಇರಲಿಲ್ಲ. ತ್ವಲ್ಹ ಬಿನ್ ಉಬೈದಿಲ್ಲ(ؓ) ರಾತ್ರಿಯ ಕತ್ತಲಲ್ಲಿ ಉಮರ್(ؓ) ತನ್ನ ಮನೆಯಿಂದ ಹೊರಟು ಬೇರೊಂದು ಜೋಪಡಿಯಲ್ಲಿ ಪ್ರವೇಶಿಸುವುದನ್ನು ಕಂಡರು. ಬಳಿಕ ಅಲ್ಲಿಂದ ಹೊರಬಂದು ಮತ್ತೊಂದು ಮನೆಗೆ ಪ್ರವೇಶಿಸುವುದನ್ನು ನೋಡಿ ಆಶ್ಚರ್ಯಚಕಿತರಾದರು. ಅಮೀರುಲ್ ಮುಅ್‌ಮಿನೀನ್ ಈ ಮನೆಗಳಲ್ಲಿ ಏನು ಮಾಡುತ್ತಾರೆಂದು ತಿಳಿಯಬೇಕೆನ್ನುವ ಕುತೂಹಲ ಅವರಲ್ಲಿ ಉಂಟಾಯಿತು. ಅವರು ಮರುದಿನ ಬೆಳಿಗ್ಗೆ ಎದ್ದು ಆ ಮನೆಗೆ ಬಂದರು. ಅಲ್ಲಿ ಅವರು ಹಾಸಿಗೆ ಹಿಡಿದಿರುವ ಒಂದು ಅಂಧ ವ್ಯಕ್ತಿಯನ್ನು ಕಂಡರು. ತ್ವಲ್ಹ(ؓ) ಆ ಮುದಿ ತಾಯಿಯೊಂದಿಗೆ ಕೇಳಿದರು. "ಆ ವ್ಯಕ್ತಿ ರಾತ್ರಿ ನಿಮ್ಮ ಬಳಿಗೆ ಏಕೆ ಬರುತ್ತಾರೆ?" ವೃದ್ಧೆ ಹೇಳಿದರು. "ಆ ವ್ಯಕ್ತಿ ಬಹಳಷ್ಟು ಕಾಲದಿಂದ ನಿತ್ಯವೂ ಬಂದು ನನ್ನನ್ನು ಉಪಚರಿಸುತ್ತಾರೆ. ಮನೆ ಸ್ವಚ್ಛಗೊಳಿಸಿ ಕುಡಿಯಲು ನೀರು ತುಂಬಿ ನನ್ನ ಮಲ-ಮೂತ್ರಗಳನ್ನು ತೊಳೆದು ಶುದ್ಧಗೊಳಿಸಿ ಬಿಟ್ಟು ಹೋಗುತ್ತಾರೆ." ತ್ವಲ್ಹ(ؓ) ಇದನ್ನು ಕೇಳಿ ಗರಬಡಿದಂತಾದರು.

ಒಂದು ರಾತ್ರಿ ಅಮೀರುಲ್ ಮುಅ್‌ಮಿನೀನ್ ಉಮರ್(ؓ) ಮದೀನದಲ್ಲಿ ಗಸ್ತು ನಡೆಸಲು ಮನೆಯಿಂದ ಹೊರಟರು. ಅವರಿಗೆ ಓರ್ವ ಪ್ರವಾಸಿ (ಮುಸಾಫಿರ್) ಎದುರಾದರು. ಉಮರ್(ؓ) ಅವರೊಂದಿಗೆ ನೀವು ಯಾರು? ಎಲ್ಲಿಂದ ಬಂದವರೆಂದು ವಿಚಾರಿಸಿದರು. ಆ ವ್ಯಕ್ತಿ ಹೇಳಿದರು. "ಕಣಿವೆಯಿಂದ ಬಂದಿದ್ದೇನೆ. ಅಮೀರುಲ್ ಮುಅ್‌ಮಿನೀನ್‌ರನ್ನು ಕಂಡು ಏನಾದರೂ ಸಹಾಯ ಪಡೆದುಕೊಂಡು ಹೋಗುವ ಉದ್ದೇಶವಿದೆ." ಉಮರ್(ؓ) ರಿಗೆ ಅವರ ಡೇರೆಯ ಒಳಗಿನಿಂದ ಮಹಿಳೆಯ ಅಳು ಕೇಳಿ ಬಂತು. ಅವರು ಆ ಕುರಿತು ವಿಚಾರಿಸಿದಾಗ ಆ ವ್ಯಕ್ತಿ ಹೇಳಿದರು. "ಅಲ್ಲಾಹು ನಿಮ್ಮ ಮೇಲೆ ಕರುಣೆ ತೋರಲಿ. ಹೋಗಿ ನಿಮ್ಮ ಕೆಲಸ ಮಾಡಿರಿ." ಉಮರ್(ؓ) ಹೇಳಿದರು. "ಇದು ಕೂಡಾ ನನ್ನ ಕೆಲಸವೇ ಆಗಿದೆ." ಆ ವ್ಯಕ್ತಿ ಹೇಳಿದರು. "ನನ್ನ ಪತ್ನಿ ಹೆರಿಗೆ ನೋವು ಅನುಭವಿಸುತ್ತಿದ್ದಾಳೆ. ನಾನೇನು ಮಾಡಲಿ? ನನ್ನ ಬಳಿ ಹಣವಿಲ್ಲ, ಸಹಾಯಕ್ಕೂ ಯಾರಿಲ್ಲ." ತಕ್ಷಣ ಉಮರ್(ؓ) ಮರಳಿ ಮನೆಗೆ ಹೋಗಿ ಪತ್ನಿ ಉಮ್ಮು ಕುಲ್ಸುಂ ಬಿಂತೆ ಅಲಿ(ؓ) ರೊಂದಿಗೆ ಹೇಳಿದರು. "ಅಲ್ಲಾಹು ನಿಮಗೊಂದು ಸತ್ಕಾರ್ಯಕ್ಕೆ ಅವಕಾಶ ಕಲ್ಪಿಸಿದ್ದಾನೆ." ಉಮ್ಮು ಕುಲ್ಸುಂ(ؓ) ಕೇಳಿದರು. "ಏನದು?" ಉಮರ್(ؓ) ವಿಷಯವನ್ನು ತಿಳಿಸಿದಾಗ ವಿಳಂಬಿಸದೆ ಕೆಲವು ಆವಶ್ಯಕ ವಸ್ತುಗಳೊಂದಿಗೆ ಅವರು

ಹೊರಟು ಬಂದರು. ಉಮ್ಮು ಕುಲ್ಸುಂ(رضي الله عنها) ಡೇರೆಯ ಒಳಗೆ ಪ್ರವೇಶಿಸಿದರು. ಉಮರ್(رضي الله عنه) ಆ ವ್ಯಕ್ತಿಯೊಂದಿಗೆ ಡೇರೆಯ ಹೊರಗೆ ಕುಳಿತುಕೊಂಡರು. ಉಮರ್(رضي الله عنه) ಕಟ್ಟಿಗೆಯನ್ನು ಜೋಡಿಸಿ ಬೆಂಕಿ ಕೊಟ್ಟು ಊದಿ, ಊದಿ ಬೆಂಕಿ ಸರಿಪಡಿಸಿದರು. ಬಳಿಕ ಅದರ ಮೇಲೆ ಪಾತ್ರೆಯನ್ನಿಟ್ಟು ನೀರು ಕಾಯಿಸಿದರು. ಹೊಗೆ ಉಮರ್(رضي الله عنه) ರವರ ದಾಡಿಯನ್ನು ಸೀಳಿಕೊಂಡು ಸಾಗುತ್ತಿತ್ತು. ಆ ವ್ಯಕ್ತಿ ಕುಳಿತುಕೊಂಡು ಉಮರ್(رضي الله عنه) ರನ್ನೇ ಗಮನಿಸುತ್ತಿದ್ದ. ಈ ಮಧ್ಯೆ ಡೇರೆಯ ಒಳಗಿನಿಂದ ಉಮ್ಮು ಕುಲ್ಸುಂ(رضي الله عنها) ರವರ ಧ್ವನಿ ಕೇಳಿ ಬಂತು. “ಅಮೀರುಲ್ ಮುಅ್‌ಮಿನೀನ್! ನಿಮ್ಮ ಸಹಪಾಠಿಗೆ ಗಂಡು ಮಗುವಿನ ಸುವಾರ್ತೆ ಕೊಡಿ.” ಆ ವ್ಯಕ್ತಿಯ ಕಿವಿಗೆ ಅಮೀರುಲ್ ಮುಅ್‌ಮಿನೀನ್ ಎಂಬ ಪದ ಕೇಳಿದಾಗ ಗಾಬರಿಗೊಂಡು ಕೇಳಿದ. “ತಾವು ಅಮೀರುಲ್ ಮುಅ್‌ಮಿನೀನ್ ಉಮರ್ ಬಿನ್ ಖತ್ತಾಬ್ ಹೌದೇ?” ಉಮರ್(رضي الله عنه) ಹೌದು ಎಂದಾಗ ಆತ ಕುಳಿತ ಸ್ಥಳದಿಂದ ಗೌರವಪೂರ್ವಕ ಎದ್ದುನಿಲ್ಲಲನುವಾದಾಗ ಉಮರ್(رضي الله عنه) ಹೇಳಿದರು. “ನೀವು ಕುಳಿತಲ್ಲೇ ಕುಳಿತಿರಿ.” ಬಳಿಕ ಉಮರ್(رضي الله عنه) ಬಿಸಿನೀರ ಪಾತ್ರೆಯನ್ನು ಇಳಿಸಿ ಡೇರೆಯ ಒಳಗೆ ಉಮ್ಮು ಕುಲ್ಸುಂ ರವರಿಗೆ ತಲುಪಿಸಿದರು ಮತ್ತು ಹೇಳಿದರು. “ಸಹೋದರಿಗೆ ಊಟ ಮಾಡಿಸು.” ಮರಳುವಾಗ ಉಮರ್(رضي الله عنه) ಆ ವ್ಯಕ್ತಿಗೆ “ನಾಳೆ ಬಂದು ಕಾಣಿ. ನಿಮ್ಮ ಊಟ-ವಸತಿಯ ಏರ್ಪಾಡು ಮಾಡಲಾಗುತ್ತದೆ.” ಎಂದರು. ವ್ಯಕ್ತಿ ನಡೆದದ್ದೆಲ್ಲ ಒಂದು ಕನಸೋ ಎಂಬಂತೆ ಆಲೋಚಿಸುತ್ತಿದ್ದರು.

ಅಲಿ ಬಿನ್ ಹುಸೈನ್(رحمه الله) ರಾತ್ರಿ ಮನೆಯಿಂದ ರೊಟ್ಟಿಗಳನ್ನು ಸೊಂಟದಲ್ಲಿ ಕಟ್ಟಿಕೊಂಡು ಹೋಗಿ ಊರಲ್ಲಿ (ಬಡವರಿಗೆ) ಹಂಚಿ ಬರುತ್ತಿದ್ದರು.

ರಹಸ್ಯವಾಗಿ ಮಾಡುವ ದಾನ ಅಲ್ಲಾಹನ ಕೋಪವನ್ನು ತಣಿಸುತ್ತದೆ. ಅವರು ಮರಣಹೊಂದಿದಾಗ ಅವರ ಮೃತದೇಹಕ್ಕೆ ಸ್ನಾನ ಮಾಡಿಸುವಾಗ ಸೊಂಟದಲ್ಲಿ ಕಪ್ಪು ಕಲೆ ಕಂಡು ಬಂದಾಗ ಜನರು ಇದು ಕೂಲಿ ಮಾಡುವವರಲ್ಲಿ ಕಂಡುಬರುವ ಕಲೆ. ಆದರೆ ಇವರು ಕೂಲಿ ಮಾಡುತ್ತಿರಲಿಲ್ಲವಲ್ಲಾ ಎಂದು ಮಾತಾಡುತ್ತಿದ್ದರು.

ಅವರ ಮರಣದ ನಂತರ ಮದೀನದ ವಿಧವೆಯರು, ವೃದ್ಧೆಯರು, ಅನಾಥರಿಗೆ ರಾತ್ರಿ ಬಂದು ತಲುಪುತ್ತಿದ್ದ ಆಹಾರ ನಿಂತು ಹೋಯಿತು. ಅಲಿ ಬಿನ್ ಹುಸೈನ್ ಅವರಿಗೆ ದಿನಾಲು ಆಹಾರ ತಲುಪಿಸುತ್ತಿದ್ದರು. ಆದರೆ ಜನರಿಗೆ ಆಹಾರ ತಲುಪಿಸುತ್ತಿರುವುದು ಯಾರೆಂದು ಅವರು ಜೀವಿಸಿರುವ ತನಕವೂ ಗೊತ್ತಿರಲಿಲ್ಲ.

ಪೂರ್ವಿಕರಲ್ಲಿ ಓರ್ವ ಸಜ್ಜನ ಹೇಗಿದ್ದರೆಂದರೆ 20 ವರ್ಷಗಳ ಕಾಲ ಅವರು ನಿರಂತರ ಒಂದು ದಿನ ಬಿಟ್ಟು ಒಂದು ದಿನ ಉಪವಾಸ ಅನುಷ್ಠಿಸುತ್ತಿದ್ದರು. ಆ ವಿಷಯ ಅವರ ಮನೆಯವರಿಗೆ ಗೊತ್ತಿರಲಿಲ್ಲ. ಅವರು ನಿತ್ಯವೂ ಮುಂಜಾನೆ ಬೆಳಗ್ಗಿನ ಉಪಹಾರ, ಮಧ್ಯಾಹ್ನದ ಊಟ ಕಟ್ಟಿಕೊಂಡು ವ್ಯಾಪಾರಕ್ಕೆ ಹೊರಟುಹೋಗುತ್ತಿದ್ದರು. ರಾತ್ರಿ ಮರಳಿ ಬಂದು ಆಹಾರ ಸೇವಿಸಿ ಮಲಗುತ್ತಿದ್ದರು. ಎರಡು ದಿನಗಳಿಗೊಮ್ಮೆ ಅವರು ತನ್ನ ಆಹಾರವನ್ನು ಬಡವರಿಗೆ ದಾನ ಮಾಡುತ್ತಿದ್ದರು. ನಿರಂತರ 20 ವರ್ಷ. ಅವರು ಮರಣ ಹೊಂದುವ ತನಕವೂ...

ವಾಸ್ತವದಲ್ಲಿ ಈ ಜನರು ಜೀವನದ ಪ್ರತಿಯೊಂದು ಪರಿಸ್ಥಿತಿಯಲ್ಲೂ ಅಲ್ಲಾಹನ ಇಬಾದತ್‌ನ ಕುರಿತು ಶ್ರದ್ಧೆ ವಹಿಸುತ್ತಿದ್ದರು. ಇಂತಹಾ ಜನರೇ ವಾಸ್ತವದಲ್ಲಿ ‘ಮುತ್ತಕಿ’ ಎಂದು ಕರೆಯಲ್ಪಡಲು ಅರ್ಹರಾಗಿದ್ದಾರೆ. ಇವರಿಗೆ ಲಭಿಸುವ ಪ್ರತಿಫಲದ ಕುರಿತು ಅಲ್ಲಾಹನ ವಚನ ಹೀಗಿದೆ.

﴿إِنَّ لِلْمُتَّقِينَ مَفَازًا ﴿٣١﴾ حَدَائِقَ وَأَعْنَابًا ﴿٣٢﴾ وَكَوَاعِبَ
أَتْرَابًا ﴿٣٣﴾ وَكَأْسًا دِهَاقًا ﴿٣٤﴾ لَّا يَسْمَعُونَ فِيهَا لَغْوًا وَلَا
كِذَّابًا ﴿٣٥﴾ جَزَاءً مِّن رَّبِّكَ عَطَاءً حِسَابًا ﴿٣٦﴾﴾

“ನಿಶ್ಚಯವಾಗಿಯೂ ಧರ್ಮನಿಷ್ಠೆ ಇರುವವರಿಗೆ ಸಫಲತೆಯ ನೆಲೆ ಇದೆ. ಸ್ವರ್ಗೋದ್ಯಾನ ಮತ್ತು ದ್ರಾಕ್ಷಿ ಹಣ್ಣುಗಳು. ಸಮಾನ ವಯಸ್ಕರಾದ ನವಯುವತಿಯರು. ತುಂಬಿ ತುಳುಕುವ ಪಾನಪಾತ್ರೆಗಳು. ಅಲ್ಲಿ ಅವರು ಯಾವುದೇ ಅಹಿತಕರ ಮಾತುಗಳನ್ನಾಗಲಿ ಸುಳ್ಳನ್ನಾಗಲಿ ಆಲಿಸಲಾರರು. ಇದು ನಿಮ್ಮ ರಬ್ಬ್‌ನ ಕಡೆಯಿಂದ ಲಭಿಸುವ ಪ್ರತಿಫಲವೂ ಸಮ್ಮಾನವೂ ಆಗಿದೆ.” (78:31-36)

ಆದ್ದರಿಂದ ನಾವು ಅಲ್ಲಾಹು ಅವಧಿ ನಿಶ್ಚಯಿಸಿರುವ ಈ ಕ್ಷಣಿಕ ಜೀವನದಲ್ಲಿ ಅಲ್ಲಾಹನ ಸಂಪ್ರೀತಿ ಸಂಪಾದಿಸಲು ಪ್ರಯತ್ನಿಸುವುದೇ ಜಾಣತನವಾಗಿದೆ. ಇದಕ್ಕಾಗಿ ಗರಿಷ್ಠ ಸಾಧ್ಯ ರಹಸ್ಯವಾದ ಇಬಾದತ್‌ಗಳನ್ನು ಅವಲಂಬಿಸಬೇಕು. ಆಗ ಅಲ್ಲಾಹು ಭೂಮಿಯಲ್ಲೂ ಆಕಾಶದಲ್ಲೂ ಜನರು ನಮ್ಮನ್ನು ಪ್ರೀತಿಸುವಂತಹಾ ಸೌಭಾಗ್ಯವನ್ನು ಕಲ್ಪಿಸುತ್ತಾನೆ.

ಜನರ ಮೆಚ್ಚಿಗೆ ಉದ್ದೇಶವಲ್ಲ. ಸರ್ವ ಚರಾಚರಗಳನ್ನು ಸೃಷ್ಟಿಸಿ ಪರಿಪಾಲಿಸುತ್ತಿರುವ ಅಲ್ಲಾಹನ ಸಂಪ್ರೀತಿಯೇ ಗುರಿಯಾಗಿರಲಿ.■

# ಪ್ರವಾದಿತ್ವ ಮತ್ತು ಪಾಂಡಿತ್ಯ

ಕಳೆದ ಹದಿನಾಲ್ಕು ಶತಮಾನಗಳ ನಡುವೆ ಮುಸ್ಲಿಂ ಜಗತ್ತಿನಲ್ಲಿ ಸಾವಿರಾರು ಪ್ರಖಾಂಡ ವಿದ್ವಾಂಸರು ಗತಿಸಿಹೋಗಿದ್ದಾರೆ. ಅವರಲ್ಲಿ ಕೆಲವರ ಕೀರ್ತಿ ವಿಶ್ವದಾದ್ಯಂತ ವ್ಯಾಪಿಸಿ ಯುಗಯುಗಗಳಿಗೂ ಮುಂದುವರಿಯುತ್ತಿದೆ. ಅವರಲ್ಲಿ ಕೆಲವರಿಗೆ ಲೋಕದ ಹಲವು ಭಾಗಗಳಲ್ಲಿ ಅನುಚರರು ಮತ್ತು ಅನುಯಾಯಿಗಳಿದ್ದಾರೆ. ಅವರು ಇಸ್ಲಾಮಿನ ಕುರಿತು ಆಳವಾಗಿ ಚಿಂತಿಸಿ ಗ್ರಂಥ ರಚನೆ ನಡೆಸಿರುವುದರಿಂದ ಗಮನಾರ್ಹರಾದರು. ಅವರ ಪೈಕಿ ನಿಸ್ವಾರ್ಥತೆ, ತ್ಯಾಗ, ಭಕ್ತಿಪೂರ್ಣವಾದ ಜೀವನದಿಂದ ಗಮನ ಸೆಳೆದವರೂ ಇದ್ದಾರೆ. ಕೆಲವರು ಅದ್ಭುತ ಕಾರ್ಯಗಳನ್ನು ಮಾಡಿದರೆಂಬ ಶ್ರುತಿಯಿಂದ ಪ್ರಸಿದ್ಧರಾಗಿರಬಹುದು. ಲೌಕಿಕ ಜ್ಞಾನದಲ್ಲಿ ಭಾರೀ ಮುಂದುವರಿದು ಖ್ಯಾತರಾದವರೂ ಅವರಲ್ಲಿದ್ದಾರೆ. ಮುಸ್ಲಿಂ ಜನಸಾಮಾನ್ಯರು ಮಾತ್ರವಲ್ಲದೆ ಕೆಲವು ವಿದ್ವಾಂಸರು ಕೂಡ ಮುಹಮ್ಮದ್(ﷺ) ರ ಮಾತು ಮತ್ತು ಕೃತಿಗಳಿಗಿಂತ ಯಾರಾದರೂ ಮಹಾ ಪಂಡಿತರ ಅಭಿಪ್ರಾಯಗಳಿಗೆ ಹೆಚ್ಚಿನ ಮಹತ್ವವನ್ನು ನೀಡುತ್ತಿರುವುದನ್ನು ನಾವು ನೋಡುತ್ತಿದ್ದೇವೆ. ಮದ್‌ಹಬ್‌ಗಳ ಇಮಾಮರು, ತರೀಖತ್ತಿನ ಶೈಖ್ ಮತ್ತಿತರ ವ್ಯಕ್ತಿಗಳ ಮೇಲಿರುವ ಅನುರಾಗಾತ್ಮಕ ಭ್ರಮೆಯಿಂದಾಗಿ ಹೀಗೆ ಸಂಭವಿಸುತ್ತದೆ.

ಮಹಾ ಪಂಡಿತರನ್ನು ಗೌರವಿಸುವುದು ಮತ್ತು ಅವರ ಅಭಿಪ್ರಾಯಗಳನ್ನು ಉಲ್ಲೇಖಿಸುವುದನ್ನು ಅಪರಾಧವೆಂದು ಹೇಳುವುದು ಇಲ್ಲಿಯ ಉದ್ದೇಶವಲ್ಲ. ಕುರ್‌ಆನ್ ಮತ್ತು ಸುನ್ನತ್ತಿಗೆ ವಿರುದ್ಧವಲ್ಲದ ಅವರ ಅಭಿಪ್ರಾಯವು ಯಾವತ್ತೂ ಸ್ವೀಕಾರಾರ್ಹವಾಗಿದೆ. ಆದರೆ ಪ್ರವಾದಿತ್ವದ ಔನ್ನತ್ಯ ಮತ್ತು ಉಜ್ವಲತೆಯನ್ನು ಅರಿತುಕೊಳ್ಳದೆ ಪಾಂಡಿತ್ಯದ ಶೋಭೆಯಲ್ಲಿ ಆಕರ್ಷಿತರಾದರೆ ಅದು ಕೆಲವೊಮ್ಮೆ ಒಳಿತಿಗಿಂತ ಹೆಚ್ಚು ಕೆಡುಕನ್ನೇ ತಂದಿಡುವ ಸಾಧ್ಯತೆಯಿದೆ. ಮುಸ್ಲಿಮರು ಪ್ರವಾದಿ ಮುಹಮ್ಮದ್(ﷺ) ರ ಜೀವನದ ಮಾದರಿಯನ್ನು ಅನುಸರಿಸುವುದು ಅವರು ಗ್ರಂಥಗಳನ್ನು ರಚಿಸಿದರು, ದೀರ್ಘವಾದ ಭಾಷಣಗಳನ್ನು ಮಾಡಿದರು ಅಥವಾ ಹಲವು ಸಂಶೋಧನೆ ಮತ್ತು ಅಧ್ಯಯನಗಳನ್ನು ನಡೆಸಿದರು ಎಂಬ ಕಾರಣದಿಂದಲ್ಲ. ಬದಲಾಗಿ ಅವರನ್ನು ಅಲ್ಲಾಹನು ತನ್ನ ಸಂದೇಶವಾಹಕರಾಗಿ ಆರಿಸಿ ಅವರಿಗೆ ದಿವ್ಯವಾಣಿ (ವಹ್ಯ್) ಅವತೀರ್ಣಗೊಳಿಸಿದ ಕಾರಣದಿಂದಾಗಿದೆ. ಪವಿತ್ರ ಕುರ್‌ಆನ್‌ನಲ್ಲಿ ಅಲ್ಲಾಹನು ಹೇಳುವುದನ್ನು ನೋಡಿರಿ.

﴿ مَا ضَلَّ صَاحِبُكُمْ وَمَا غَوَىٰ ﴿٢﴾ وَمَا يَنطِقُ عَنِ الْهَوَىٰ ﴿٣﴾ إِنْ هُوَ إِلَّا وَحْيٌ يُوحَىٰ ﴿٤﴾ ﴾

"ನಿಮ್ಮ ಸಂಗಾತಿ ದಾರಿಗೆಡಲಿಲ್ಲ ಮತ್ತು ಅವರಿಗೆ ತಪ್ಪು ಸಂಭವಿಸಿಲ್ಲ. ಅವರು ತನ್ನಿಚ್ಛೆಯಂತೆ ಮಾತನಾಡುವುದಿಲ್ಲ. ಅದು ಅವರಿಗೆ ನೀಡುವ ವಹ್ಯ್ (ದೈವಿಕ ಸಂದೇಶ) ಅಲ್ಲದೆ ಇನ್ನೇನೂ ಅಲ್ಲ." (53:2-4)

ಅಲ್ಲಾಹನ ಧರ್ಮವನ್ನು ಸ್ವೀಕರಿಸುವುದರ ತಾತ್ಪರ್ಯವೇನೆಂದರೆ ಅವನ ಗ್ರಂಥ ಹಾಗೂ ಅವನು ನಿಯೋಗಿಸಿದ ಪ್ರವಾದಿ(ﷺ) ಯವರ ಮಾರ್ಗದರ್ಶನದ ಪ್ರಕಾರ ಜೀವಿಸುವುದು ಎಂದಾಗಿದೆ. ಒಬ್ಬ ವಿದ್ವಾಂಸನ ಅಭಿಪ್ರಾಯಕ್ಕನುಸಾರವಿರುವ ಜೀವನಕ್ಕೆ ಅಲ್ಲಾಹನ ಧರ್ಮದಲ್ಲಿ ಮಾನ್ಯತೆ ಲಭಿಸುವುದು ಆ ಅಭಿಪ್ರಾಯಕ್ಕೆ ಕುರ್‌ಆನ್ ಮತ್ತು ಪ್ರವಾದಿಚರ್ಯೆಯ ಆಧಾರವಿರುವಾಗ ಮಾತ್ರ. ಅಂದರೆ ಒಬ್ಬ ವಿದ್ವಾಂಸನು ನೀವು ಇಂತಹ ಸಮಯದಲ್ಲಿ ಎರಡು ರಕ್‌ಅತ್ ಸುನ್ನತ್ ನಮಾಝ್ ನಿರ್ವಹಿಸಬೇಕೆಂದು ಆದೇಶಿಸಿದರೆ, ಆ ಆದೇಶ ಮಾತ್ರದಿಂದ ಅದು ಇಸ್ಲಾಮಿನಲ್ಲಿ ಪುಣ್ಯಕರ್ಮವಾಗುವುದಿಲ್ಲ. ಕುರ್‌ಆನ್ ಮತ್ತು ಹದೀಸ್‌ನಲ್ಲಿ ಅಂತಹ ಒಂದು ಸುನ್ನತ್

ಇದೆಯೆಂದು ಪುರಾವೆಯಿದ್ದರೆ ಮಾತ್ರ ಅದು ಪುಣ್ಯಕರ್ಮವಾಗುತ್ತದೆ. ಆದುದರಿಂದ ವಿನಯ ಮತ್ತು ಪ್ರಾಮಾಣಿಕತೆಯಿರುವ ವಿದ್ವಾಂಸರು ಜನರಿಗೆ ಧರ್ಮದ ವಿಷಯಗಳನ್ನು ಹೇಳಿಕೊಡುವಾಗ ಅವರು ಉಲ್ಲೇಖಿಸುವ ಮಹಾ ಪಂಡಿತರ ಅಭಿಪ್ರಾಯಕ್ಕೆ ಕುರ್‌ಆನ್ ಮತ್ತು ಹದೀಸ್‌ನ ಪುರಾವೆಗಳನ್ನು ನೀಡುವುದು ಅವರ ಕರ್ತವ್ಯವಾಗಿದೆ. ಇವೆರಡು ಪ್ರಮಾಣಗಳಿಗೆ ವಿರುದ್ಧವಾದ ಅಭಿಪ್ರಾಯ ಅದು ಮದ್‌ಹಬ್‌ನ ಇಮಾಮರು ಅಥವಾ ಬೇರೆ ಯಾರು ಹೇಳಿದರೂ ಸ್ವೀಕಾರಾರ್ಹವಾಗುವುದಿಲ್ಲ. ಜನರು ವಿದ್ವಾಂಸರನ್ನು ಭೇಟಿಯಾಗುವುದು ಅವರ ಅಭಿಪ್ರಾಯವನ್ನು ತಿಳಿಯಲಿಕ್ಕಲ್ಲ. ಬದಲಾಗಿ ಪ್ರಮಾಣಗಳು ಸ್ಪಷ್ಟಪಡಿಸುವ ಆಶಯವನ್ನು ಅರಿಯುವ ಉದ್ದೇಶದಿಂದಾಗಿದೆ.

ಆದರೆ ಮುಸ್ಲಿಂ ಸಮುದಾಯದ ಕೆಲವು ವಿಭಾಗಗಳಲ್ಲಿ ಅಲ್ಲಾಹ್ ಹಾಗೂ ಪ್ರವಾದಿ(ﷺ) ಯವರು ಏನು ಹೇಳಿದ್ದಾರೆಂದು ತಿಳಿಯುವ, ತಿಳಿಸುವ, ಚಿಂತಿಸುವ ಪರಿಪಾಠ ಬಹುತೇಕ ಮಾಯವಾಗಿಬಿಟ್ಟಿದೆ. ಇಂದು ಧಾರ್ಮಿಕ ಶಿಕ್ಷಣವೆಂದರೆ ಆ ಮದ್‌ಹಬ್‌ನ ಹೇಳಿಕೆ, ಈ ಮದ್‌ಹಬ್‌ನ ಇಮಾಮರು ಏನು ಹೇಳಿದ್ದಾರೆ, ತರೀಖತ್ತಿನ ಶೈಖರ ಅಭಿಪ್ರಾಯವೇನು ಎಂದು ಕಲಿಸುವ–ಕಲಿಯುವ ಹಂತಕ್ಕೆ ಬಂದುಬಿಟ್ಟಿದೆ. ಬಹುತೇಕ ಶಿಕ್ಷಣ ಕೇಂದ್ರಗಳಲ್ಲಿ ಕುರ್‌ಆನ್ ಮತ್ತು ಹದೀಸ್‌ಗೆ ಸಂಬಂಧಪಟ್ಟ ಆಳವಾದ ಅಧ್ಯಯನಕ್ಕೆ ಅವಕಾಶವಿಲ್ಲದಂತಾಯಿತು. ಅಲ್ಲಿ ಏನಿದ್ದರೂ, ಮದ್‌ಹಬ್ ಮತ್ತು ತರೀಕತ್ತಿನ ಆಧಾರದಲ್ಲಿ ಕೂದಲು ಸೀಳುವ ನಿರರ್ಥಕ ಚರ್ಚೆಗಳಷ್ಟೇ ನಡೆಯುತ್ತಿದೆ. ಈ ನಿಲುವು ಸರಿಯಲ್ಲ. ಇತರರು ಹೇಳುವುದಕ್ಕಿಂತ ಅಲ್ಲಾಹನು ದಿವ್ಯವಾಣಿ ಅವತೀರ್ಣಗೊಳಿಸಿ ಮಾನವ ಜನಾಂಗಕ್ಕೆ ಮಾರ್ಗದರ್ಶಕರಾಗಿ ಕಳುಹಿಸಿದ ಪ್ರವಾದಿ(ﷺ) ಯವರ ಮಾತಿಗೆ ಹೆಚ್ಚು ಬೆಲೆ ನೀಡಬೇಕೆಂದು ಕೆಲವರು ಅವರ ತಪ್ಪುಗಳನ್ನು ತೋರಿಸಿಕೊಟ್ಟಾಗ, ಇಂತಹವರಿಗೆ ಮದ್‌ಹಬ್ ಮತ್ತು ತರೀಖತ್ತಿನ ವಿರೋಧಿಗಳೆಂದು ಮುದ್ರೆಯೊತ್ತಲಾಯಿತು. ಕುರ್‌ಆನ್ ಮತ್ತು ಸುನ್ನತ್ತಿನ ವಕ್ತಾರರು ಮುಸ್ಲಿಂ ವಿದ್ವಾಂಸರು ಶತಮಾನಗಳ ಕಾಲ ಅಭಿವೃದ್ಧಿಪಡಿಸಿದ, ಹಲವು ಸಹಸ್ರ ಪುಟಗಳಲ್ಲಿ ವ್ಯಾಪಿಸಿರುವ ಫಿಕ್‌ಹ್ ಮತ್ತು ತಸವ್ವುಫ್‌ನ ಶತ್ರುಗಳೆಂದು ಬಿಂಬಿಸಲ್ಪಟ್ಟರು.

ಅದೆಷ್ಟು ಲಕ್ಷ ವಿದ್ವಾಂಸರು ಅಭಿವೃದ್ಧಿಪಡಿಸಿದ ಜ್ಞಾನವಾದರೂ ಅದು ಅಲ್ಲಾಹನು ತನ್ನ ಅಂತಿಮ ಪ್ರವಾದಿ(ﷺ) ಯವರಿಗೆ ದಯಪಾಲಿಸಿದ ವಹ್ಯ್‌ಗಿಂತ ಮಿಗಿಲಾದ ಜ್ಞಾನವಲ್ಲ. ಅದರಲ್ಲಿ ಯಾವುದೇ ವಿಧದ ಗೊಂದಲ ಕಲಬೆರಕೆಗಳಿಲ್ಲ. ಪ್ರಬಲವಾದ ಹದೀಸ್‌ಗಳ ಸ್ಥಿತಿಯೂ ತದ್ವೈವ. ಪ್ರವಾದಿ(ﷺ) ಯವರ ಧಾರ್ಮಿಕ ಕಾರ್ಯಗಳ ಕುರಿತು ತಮ್ಮ ಸ್ವಇಚ್ಛೆಯಂತೆ ಮಾತನಾಡಿದವರಲ್ಲ. ಇಂತಹ ಹದೀಸ್‌ಗಳು ಕೂಡ ಕಾಲಹರಣಗೊಳ್ಳದೆ ಎಲ್ಲಾ ಪ್ರದೇಶ ಹಾಗೂ ಸಮುದಾಯಗಳಿಗೆ ಪ್ರಸಕ್ತವಾಗಿದೆ.

ಮಹಾ ವಿದ್ವಾಂಸರ ಬೃಹತ್ ಗ್ರಂಥಗಳಲ್ಲಿರುವ ವಿಪುಲ ಜ್ಞಾನದ ಮೌಲ್ಯವನ್ನು ಕಡೆಗಣಿಸುವುದು ಇಲ್ಲಿಯ ಉದ್ದೇಶವಲ್ಲ. ಅವರು ಆಳವಾಗಿ ಚಿಂತಿಸಿ ದಾಖಲಿಸಿಟ್ಟ ಜ್ಞಾನ ನಿಜಕ್ಕೂ ಬಹಳ ಮೌಲ್ಯಯುತವಾಗಿದೆ. ಅವರ ಕಾಲದಲ್ಲಿ ಅವರು ಇಸ್ಲಾಮಿಗಾಗಿ ಮಾಡಿದ ಸೇವೆ ಬೆಲೆಬಾಳುವಂತದ್ದಾಗಿದೆ.

ಈ ಕಾಲದಲ್ಲಿ ಜನರು ಕುರ್‌ಆನ್ ಮತ್ತು ಹದೀಸ್‌ನ ಪ್ರಕಾರ ಜೀವಿಸದೆ, ಶಾಫಿಈ ಮದ್‌ಹಬ್‌ಗನುಸಾರ ಜೀವಿಸಬೇಕೆಂಬ ಅಭಿಪ್ರಾಯವಿರುವ ಸಮಸ್ತದ ವಿದ್ವಾಂಸರು ಅವರ ಭಾಷಣಗಳಲ್ಲಿ ಇದೀಗ ಧಾರಾಳ ಕುರ್‌ಆನ್ ಮತ್ತು ಹದೀಸ್‌ಗಳನ್ನು ಉಲ್ಲೇಖಿಸಲಾರಂಭಿಸಿದ್ದಾರೆ. ಅವರು ಪ್ರಮಾಣವನ್ನಾಗಿ ಮಾಡಿಕೊಳ್ಳುವ ಮದ್‌ಹಬ್ ಗ್ರಂಥಗಳಿಂದ ಉಲ್ಲೇಖಿಸಿದರೆ ಇಂದಿನ ಪೀಳಿಗೆ ಅದರಿಂದ ಸ್ವಲ್ಪವೂ ಆಕರ್ಷಿತರಾಗುವುದಿಲ್ಲವೆಂಬ ಸತ್ಯವು ಅವರಿಗೆ ಗೊತ್ತಿರುವುದರಿಂದ ತಮ್ಮ ಭಾಷಣಗಳನ್ನು ಅಲ್ಲಾಹನ ವಚನ ಮತ್ತು ಹದೀಸ್‌ನಿಂದ ಸಂಪನ್ನಗೊಳಿಸಲು ಪ್ರಯತ್ನಿಸುತ್ತಿದ್ದಾರೆ. ಆದರೆ ಕಾಲಹರಣಗೊಳ್ಳದ ಪ್ರಮಾಣಗಳಾದ ಕುರ್‌ಆನ್ ಮತ್ತು ಹದೀಸ್‌ನ ಆಧಾರದಲ್ಲಿ ಆದರ್ಶ ಜೀವನವನ್ನು ನಡೆಸಬೇಕೆಂದು ಹೇಳುವವರನ್ನು ಮಾತ್ರ ಅವರು ಆಕ್ಷೇಪಿಸುತ್ತಿದ್ದಾರೆ. ಇದು ದ್ವಿಮುಖ ಧೋರಣೆಯಾಗಿದೆ.

ಸೂಫೀ ತರೀಖತ್ತಿನ ಶೈಖರು ನಾವು ಅಲ್ಲಾಹನನ್ನು ಅತ್ಯಧಿಕವಾಗಿ ಪ್ರೀತಿಸುವವರು, ಸ್ವಂತದ ಕುರಿತು ಚಿಂತಿಸುವುದನ್ನು ತೊರೆದವರು, ಅಲ್ಲಾಹನಲ್ಲಿ ವಿಲೀನವಾಗಲು ಹಾತೊರೆಯುವವರು ಎಂದೆಲ್ಲ ಬಡಬಡಿಸುತ್ತಾರೆ. ಅದರ ಜೊತೆಗೆ ಅವರು ಅಲ್ಲಾಹನು ಅನುಸರಿಸಬೇಕೆಂದು ಹೇಳುವ, ಅವನು ಅತ್ಯಧಿಕ ಪ್ರೀತಿಸುವ ಪ್ರವಾದಿ (ﷺ) ಯವರಿಗೆ ದಯಪಾಲಿಸಿದ ಶರೀಅತ್ತನ್ನು ಅವಗಣಿಸುತ್ತಾರೆ. ಮಾನವ ಜನಾಂಗದ ಮೋಕ್ಷಮಾರ್ಗವಾಗಿ ಅಲ್ಲಾಹನು ನಿಶ್ಚಯಿಸಿದ ಶರೀಅತ್ತನ್ನು ನಿರ್ಲಕ್ಷಿಸುವ ಮೂಲಕ ಮಹಾಪುರುಷರಾಗಬಹುದೆಂದು ವಾದಿಸುವ ತರೀಖತ್ ವಾದಿಗಳು ವಾಸ್ತವದಲ್ಲಿ ಶರೀಅತ್ತನ್ನು ಬಲವಾಗಿ ಹಿಡಿದುಕೊಂಡಿದ್ದ ಪ್ರವಾದಿ ಮುಹಮ್ಮದ್(ﷺ) ರನ್ನು ಪರಿಹಾಸ್ಯ ಮಾಡುವವರಾಗಿದ್ದಾರೆ.

ವಿದ್ವಾಂಸರಿಗೆ ಅಲ್ಲಾಹನ ಸನ್ನಿಧಿಯಲ್ಲಿ ಮಹತ್ವಪೂರ್ಣ ಸ್ಥಾನಮಾನವಿದೆ ಎನ್ನುವುದು ನಿಜ. ಭಕ್ತಿರಿಗಿರುವ ಉನ್ನತ ದರ್ಜೆಯೂ ಸಂದೇಹಾತೀತ. ಆದರೆ ಪ್ರವಾದಿತ್ವದ ಸ್ಥಾನಮಾನ ಅವುಗಳಿಗಿಂತ

*49 ನೇ ಪುಟಕ್ಕೆ*

# ಮರಣಾನಂತರ ಜೀವನ

ಮರಣಾನಂತರ ಜೀವನವೆಂಬ ಪರಿಕಲ್ಪನೆಯನ್ನು ನಿಷೇಧಿಸಿದರೆ ಅದರ ಘೋರ ಪರಿಣಾಮವನ್ನು ಪರಲೋಕದಲ್ಲಿ ಮಾತ್ರವಲ್ಲದೆ ಇಹಲೋಕದಲ್ಲೂ ಎದುರಿಸಬೇಕಾಗುತ್ತದೆ. ಇದು ಕೇವಲ ವ್ಯಕ್ತಿಯನ್ನು ಮಾತ್ರವಲ್ಲದೆ ಸಮಾಜವನ್ನೂ ಬಾಧಿಸುತ್ತದೆ. ಮರಣಾನಂತರ ಜೀವನವನ್ನು ಒಂದು ಸಮಾಜವು ಪೂರ್ಣವಾಗಿ ನಿಷೇಧಿಸುವಾಗ ಆ ಸಮಾಜದಲ್ಲಿ ಕೆಡುಕುಗಳ ವಿಜೃಂಭನೆ ಅಧಿಕವಾಗಿ ಕೊನೆಗೆ ಅದು ನಾಶವಾಗಿ ಹೋಗುತ್ತದೆ. ಇತಿಹಾಸದಲ್ಲಿ ಇದಕ್ಕೆ ಬೇಕಾದಷ್ಟು ಉದಾಹರಣೆಗಳಿವೆ.

ಮರಣಾನಂತರ ಜೀವನ (life after death) ಇದೆಯೋ ಇಲ್ಲವೋ ಎಂಬ ವಿಷಯ ವಿಜ್ಞಾನದ ವ್ಯಾಪ್ತಿಯಲ್ಲಿ ಬರುವುದಿಲ್ಲ. ಕಾರಣ, ವಿಜ್ಞಾನ ಪರಿಗಣಿಸುವುದು ಕೇವಲ ಮಾಹಿತಿಗಳ ವರ್ಗೀಕರಣ ಮತ್ತು ವಿಶ್ಲೇಷಣೆ (classification and analysis of data) ಯನ್ನು ಮಾತ್ರ. ಹೆಚ್ಚಾಗಿ, ಮಾನವನು ಆಧುನಿಕ ಪ್ರಜ್ಞೆಯೊಂದಿಗೆ ವೈಜ್ಞಾನಿಕ ತಪಾಸನೆ ಹಾಗೂ ಸಂಶೋಧನೆ (scientific inquiring and research) ಯಲ್ಲಿ ನಿರತನಾಗಿರುವುದು ಕಳೆದ ಕೆಲವು ಶತಮಾನಗಳ ಹಿಂದೆ. ಆದರೆ ಮರಣಾನಂತರ ಜೀವನವೆಂಬ ಪರಿಕಲ್ಪನೆಯು ಮನುಷ್ಯನ ಮನಸ್ಸಿನಲ್ಲಿ ಅನಿರ್ದಿಷ್ಟ ಕಾಲದಿಂದಲೇ ಹಾಸುಹೊಕ್ಕಿ ಸುಪರಿಚಿತವಾಗಿದೆ.

ಅಲ್ಲಾಹನನ್ನು ಮಾತ್ರ ಆರಾಧಿಸಬೇಕು ಮತ್ತು ಮರಣಾನಂತರ ಜೀವನದಲ್ಲಿ ವಿಶ್ವಾಸವಿಡಬೇಕು ಎಂಬ ತತ್ವವನ್ನು ಎಲ್ಲ ಪ್ರವಾದಿಗಳೂ ತಮ್ಮ ತಮ್ಮ ಜನತೆಗೆ ಬೋಧಿಸಿದ್ದರು. ಮರಣಾನಂತರ ಜೀವನದಲ್ಲಿ ವಿಶ್ವಾಸವಿಡಬೇಕೆಂದು ಬೋಧಿಸದ ಒಬ್ಬರೇ ಒಬ್ಬ ಪ್ರವಾದಿಯೂ ಇಲ್ಲ. ಮರಣಾನಂತರ ಜೀವನದಲ್ಲಿರುವ ವಿಶ್ವಾಸಕ್ಕೆ ಪ್ರವಾದಿಗಳು ಎಷ್ಟೊಂದು ಒತ್ತು ನೀಡುತ್ತಿದ್ದರೆಂದರೆ ಅದರಲ್ಲಿರುವ ಕೊಂಚ ಸಂದೇಹವೂ ದೇವನಿಷೇಧ ಮತ್ತು ಧರ್ಮದ ಇತರೆಲ್ಲ ನಂಬಿಕೆಗಳ ನಿರಾಕರಣೆಗೆ ಸಮಾನವಾಗಿದೆ ಎಂದು ಅವರು ಬೋಧಿಸುತ್ತಿದ್ದರು.

ವಾಸ್ತವವಾಗಿ, ಮರಣಾನಂತರ ಜೀವನವೆಂಬ ಈ ಅಭೌತಿಕ ವಿಷಯದ ಕುರಿತು ಪ್ರವಾದಿಗಳೆಲ್ಲರೂ ಅತ್ಯಧಿಕ ಆತ್ಮವಿಶ್ವಾಸದಿಂದ ಮತ್ತು ಸಮಾನ ದೃಷ್ಟಿಕೋನದಿಂದ ಬೋಧಿಸಿದ್ದರು. ಕೆಲವೊಮ್ಮೆ ಇಬ್ಬರು ಪ್ರವಾದಿಗಳ ಮಧ್ಯೆಯಿದ್ದ ಅಂತರವು ಸಾವಿರ ವರ್ಷಗಳಷ್ಟು ದೀರ್ಘವಾಗಿದ್ದಾಗಲೂ ಸಹ ಆ ಬೋಧನೆಗಳಲ್ಲಿರುವ ತತ್ವ ಸಾಮ್ಯತೆಯು ಅವರೆಲ್ಲರೂ ಇದನ್ನು ಏಕೈಕ ದೈವಿಕ ಮೂಲದಿಂದ ಪಡೆದಿದ್ದರು ಎನ್ನುವುದನ್ನು ಸಾಬೀತುಪಡಿಸುತ್ತದೆ.

ನಮಗೆಲ್ಲರಿಗೂ ತಿಳಿದಿರುವಂತೆ ಪ್ರವಾದಿಗಳೆಲ್ಲರೂ ತಮ್ಮ ತಮ್ಮ ಜನತೆಗಳಿಂದ ವ್ಯಾಪಕ ವಿರೋಧವನ್ನು ಎದುರಿಸಿದ್ದರು. ಏಕದೇವಾರಾಧನೆಯನ್ನು ವಿರೋಧಿಸುವವರು ಮಾತ್ರವಲ್ಲದೆ ಮರಣಾನಂತರ ಜೀವನವೆಂಬ ಪರಿಕಲ್ಪನೆಯನ್ನು ಅಂಗೀಕರಿಸಲು ಸಿದ್ಧರಿಲ್ಲದ ಜನರೂ ಕೂಡ ಇವರ ಬದ್ಧ ವಿರೋಧಿಗಳಾಗಿದ್ದರು. ಹೀಗಿರುವಾಗ, ಈ ವಿರೋಧದ ಮಧ್ಯೆಯೂ ಅನೇಕ ಜನರು ಪ್ರವಾದಿಗಳಲ್ಲಿ ವಿಶ್ವಾಸವಿಟ್ಟು ಅವರ ಪ್ರಾಮಾಣಿಕ ಅನುಯಾಯಿಗಳಾಗಿ ಮಾರ್ಪಟ್ಟಿದ್ದರು.

ಇಲ್ಲಿ ಉದ್ಭವಿಸುವ ಪ್ರಶ್ನೆಯೇನೆಂದರೆ, ಅಸ್ತಿತ್ವದಲ್ಲಿದ್ದ ನಂಬಿಕೆಗಳನ್ನೂ, ಸಂಪ್ರದಾಯಗಳನ್ನೂ, ತಾತ ಮುತ್ತಾತಂದಿರ ಕಾಲದಿಂದ ವಂಶೀಯವಾಗಿ ಅನುಸರಿಸುತ್ತಾ ಬಂದಿರುವ ರೂಢಮೂಲ ವಿಶ್ವಾಸ (ancestral beliefs) ಗಳನ್ನು ತೊರೆದು, ತಮ್ಮ ಜನತೆಯಿಂದ

ಪೂರ್ಣವಾಗಿ ಬಹಿಷ್ಕರಿಸಲ್ಪಡುವ ಅಪಾಯಕ್ಕೆ ತಲೆಯೊಡ್ಡಿ ಪ್ರವಾದಿಗಳು ಬೋಧಿಸಿದ ಆ ಮರಣಾನಂತರ ಜೀವನವೆಂಬ ಪರಿಕಲ್ಪನೆಯನ್ನು ಅವರು ಅಂಗೀಕರಿಸಲು ಕಾರಣವೇನು? ಇದಕ್ಕಿರುವ ಸರಳ ಉತ್ತರವೇನೆಂದರೆ ಅವರು ಹೃದಯಾಳದಿಂದ ಚಿಂತಿಸಿದರು. ಸತ್ಯವು ಮನಗಂಡಾಗ ಅದರ ಹಿಂಬಾಲಕರಾಗಿ ಮಾರ್ಪಟ್ಟರು.

ಅಗೋಚರವಾಗಿರುವ ವಿದ್ಯಮಾನಗಳ ಕುರಿತು ಮನುಷ್ಯನನ್ನು ಸತ್ಯದತ್ತ ಮುನ್ನಡೆಸುವ ಆಂತರಿಕ ಪ್ರಜ್ಞೆಯಾಗಿದೆ ಇದು. ಈ ಕಾರಣದಿಂದಲೇ ಪ್ರವಾದಿಗಳು ಜನರನ್ನು ಅಲ್ಲಾಹನೆಡೆಗೆ ಆಹ್ವಾನಿಸುವಾಗ ಅವರು ಜನರ ನೈತಿಕ ಮತ್ತು ವೈಚಾರಿಕ ಪ್ರಜ್ಞೆಯ ಮೊರೆಹೋಗುತ್ತಿದ್ದರು.

ಉದಾಹರಣೆಗೆ, ಮಕ್ಕಾ ನಿವಾಸಿಗಳಾದ ಬಹುದೇವ ವಿಶ್ವಾಸಿಗಳು ಮರಣಾನಂತರ ಜೀವನವೆಂಬ ಪರಿಕಲ್ಪನೆಯನ್ನು ನಿಷೇಧಿಸಿದಾಗ ಪವಿತ್ರ ಕುರ್‌ಆನ್ ಯುಕ್ತಿಬದ್ಧವಾದ ಮತ್ತು ವೈಚಾರಿಕ ತರ್ಕಗಳ (logical and rational arguments) ಆಧಾರದೊಂದಿಗೆ ಅವರ ದುರ್ಬಲ ನಿಲುವನ್ನು ಖಂಡಿಸಿತು:

﴿أَوَلَمْ يَرَ ٱلْإِنسَٰنُ أَنَّا خَلَقْنَٰهُ مِن نُّطْفَةٍ فَإِذَا هُوَ
خَصِيمٌ مُّبِينٌ ﴿٧٧﴾ وَضَرَبَ لَنَا مَثَلًا وَنَسِيَ خَلْقَهُۥ
قَالَ مَن يُحْيِ ٱلْعِظَٰمَ وَهِيَ رَمِيمٌ ﴿٧٨﴾ قُلْ يُحْيِيهَا
ٱلَّذِيٓ أَنشَأَهَآ أَوَّلَ مَرَّةٍ وَهُوَ بِكُلِّ خَلْقٍ عَلِيمٌ
﴿٧٩﴾ ٱلَّذِي جَعَلَ لَكُم مِّنَ ٱلشَّجَرِ ٱلْأَخْضَرِ نَارًا
فَإِذَآ أَنتُم مِّنْهُ تُوقِدُونَ ﴿٨٠﴾ أَوَلَيْسَ ٱلَّذِي خَلَقَ
ٱلسَّمَٰوَٰتِ وَٱلْأَرْضَ بِقَٰدِرٍ عَلَىٰٓ أَن يَخْلُقَ مِثْلَهُم
بَلَىٰ وَهُوَ ٱلْخَلَّٰقُ ٱلْعَلِيمُ ﴿٨١﴾ إِنَّمَآ أَمْرُهُۥٓ إِذَآ أَرَادَ
شَيْـًٔا أَن يَقُولَ لَهُۥ كُن فَيَكُونُ ﴿٨٢﴾ فَسُبْحَٰنَ
ٱلَّذِي بِيَدِهِۦ مَلَكُوتُ كُلِّ شَيْءٍ وَإِلَيْهِ تُرْجَعُونَ ﴿٨٣﴾﴿

"ಅವನು (ಮನುಷ್ಯನು) ನಮಗೊಂದು ಉದಾಹರಣೆ ಕೊಟ್ಟಿದ್ದಾನೆ ಮತ್ತು ತನ್ನ ಸೃಷ್ಟಿಯನ್ನೇ ಮರೆತು ಬಿಟ್ಟಿದ್ದಾನೆ! ಅವನು ಕೇಳುತ್ತಾನೆ: ಈ ಮೂಳೆಗಳು ಕೊಳೆತುಹೋಗಿ ಜೀರ್ಣವಾದ ಬಳಿಕ ಇದಕ್ಕೆ ಜೀವ ಕೊಡುವವರು ಯಾರು? (ಓ ಪ್ರವಾದಿಯವರೇ! ಅವರೊಂದಿಗೆ) ಹೇಳಿರಿ: ಅವುಗಳನ್ನು (ಮೂಳೆಗಳನ್ನು) ಮೊಟ್ಟಮೊದಲು ಸೃಷ್ಟಿಸಿದವನು ಯಾರೋ ಅವನೇ ಅದಕ್ಕೆ (ಪುನಃ) ಜೀವ ಕೊಡುತ್ತಾನೆ. ಅವನು ಎಲ್ಲ ಸೃಷ್ಟಿಗಳ ಬಗ್ಗೆಯೂ ಅರಿವುಳ್ಳವನಾಗಿದ್ದಾನೆ. ಅವನು ಹಸಿ ಮರದಿಂದ ಬೆಂಕಿಯನ್ನು ಉತ್ಪಾದಿಸಿಕೊಟ್ಟವನು! ಅಗೋ ನೋಡಿರಿ! ನೀವು ಅದರಿಂದ ಬೆಂಕಿಯುರಿಸುತ್ತಿರುವಿರಿ! ಆಕಾಶಗಳನ್ನು ಮತ್ತು ಭೂಮಿಯನ್ನು (ಸಮಸ್ತ ವಿಶ್ವವನ್ನು) ಸೃಷ್ಟಿಸಿದವನಾರೋ ಅವನಿಗೆ ನಿಮ್ಮಂತಿರುವವರನ್ನು ಸೃಷ್ಟಿಸಲು ಸಾಧ್ಯವಿಲ್ಲವೇ? ಹೌದು! ಸತ್ಯವಾಗಿಯೂ ಅವನು ಎಲ್ಲವನ್ನೂ ಬಲ್ಲ ಪರಮೋಚ್ಛ ಸೃಷ್ಟಿಕರ್ತನು. ಅವನು ಯಾವುದಾದರೊಂದು ವಸ್ತುವನ್ನು ಸೃಷ್ಟಿಸಲು ಇಚ್ಛಿಸಿದರೆ ಅದರೊಂದಿಗೆ ಉಂಟಾಗು ಎಂದಷ್ಟೇ ಹೇಳುವನು. ತಕ್ಷಣ ಅದುಂಟಾಗುವುದು. ಆದ್ದರಿಂದ ಸಕಲ ವಸ್ತುಗಳ ಒಡೆತನ ಯಾರ ಕೈಯಲ್ಲಿದೆಯೋ ಅವನು ಪರಮ ಪಾವನನು. ನೀವೆಲ್ಲರೂ ಅವನ ಬಳಿಗೇ ಮರಳುವವರಾಗಿದ್ದೀರಿ." (ಕುರ್‌ಆನ್ 36:77-83)

ಇನ್ನೊಂದು ಕಡೆ, ಮರಣಾನಂತರ ಜೀವನವಿಲ್ಲ ಎಂಬ ಅವಿಶ್ವಾಸಿಗಳ ವಾದಕ್ಕೆ ಯಾವ ಆಧಾರವೂ ಇಲ್ಲವೆಂಬುದನ್ನು ದೃಢೀಕರಿಸುತ್ತಾ ಪವಿತ್ರ ಕುರ್‌ಆನ್ ಹೇಳುತ್ತದೆ:

﴿وَقَالُوا۟ مَا هِيَ إِلَّا حَيَاتُنَا ٱلدُّنْيَا نَمُوتُ وَنَحْيَا وَمَا يُهْلِكُنَآ
إِلَّا ٱلدَّهْرُ ۚ وَمَا لَهُم بِذَٰلِكَ مِنْ عِلْمٍ ۖ إِنْ هُمْ إِلَّا يَظُنُّونَ
﴿٢٤﴾ وَإِذَا تُتْلَىٰ عَلَيْهِمْ ءَايَٰتُنَا بَيِّنَٰتٍ مَّا كَانَ حُجَّتَهُمْ
إِلَّآ أَن قَالُوا۟ ٱئْتُوا۟ بِـَٔابَآئِنَآ إِن كُنتُمْ صَٰدِقِينَ ﴿٢٥﴾
قُلِ ٱللَّهُ يُحْيِيكُمْ ثُمَّ يُمِيتُكُمْ ثُمَّ يَجْمَعُكُمْ إِلَىٰ يَوْمِ ٱلْقِيَٰمَةِ
لَا رَيْبَ فِيهِ وَلَٰكِنَّ أَكْثَرَ ٱلنَّاسِ لَا يَعْلَمُونَ ﴿٢٦﴾﴿

"ಅವರು (ಅವಿಶ್ವಾಸಿಗಳು) ಹೇಳುತ್ತಾರೆ: ನಮ್ಮ ಈ ಐಹಿಕ ಜೀವನವನ್ನು ಬಿಟ್ಟರೆ ಇನ್ನೇನೂ ಇಲ್ಲ. ನಾವು ಸಾಯುತ್ತೇವೆ ಮತ್ತು ಬದುಕುತ್ತೇವೆ. ಕಾಲದ ಹೊರತು ಇನ್ನೇನೂ ನಮ್ಮನ್ನು ನಾಶಗೊಳಿಸುವುದಿಲ್ಲ. ಆದರೆ (ವಾಸ್ತವವಾಗಿ) ಅವರಿಗೆ ಆ ವಿಷಯದಲ್ಲಿ ಯಾವುದೇ ಜ್ಞಾನವಿಲ್ಲ. ಅವರು ಕೇವಲ ಊಹೆಯನ್ನಷ್ಟೇ ಹಿಂಬಾಲಿಸುತ್ತಿದ್ದಾರೆ. (ಮರಣಾನಂತರ ಜೀವನದ ಕುರಿತು) ನಮ್ಮ ಸುಸ್ಪಷ್ಟವಾದ ಪುರಾವೆಗಳನ್ನು ಅವರಿಗೆ ಓದಿಕೊಟ್ಟಾಗ ಅವರು ಹೇಳುವ ಪುರಾವೆಯು, ನೀವು ಸತ್ಯವನ್ನೇ ನುಡಿಯುವವರಾಗಿದ್ದರೆ (ಸತ್ತುಹೋದ) ನಮ್ಮ ಪೂರ್ವಿಕರನ್ನು ಮರಳಿ ತನ್ನಿರಿ ಎಂದಲ್ಲದೆ ಇನ್ನೇನೂ ಆಗಿರುವುದಿಲ್ಲ. (ಓ ಪ್ರವಾದಿಯವರೇ! ಅವರೊಂದಿಗೆ)

ಹೇಳಿರಿ: ಅಲ್ಲಾಹು ಜೀವ ಕೊಡುತ್ತಾನೆ. ತರುವಾಯ ಮೃತಪಡಿಸುತ್ತಾನೆ. ತರುವಾಯ ನಿಮ್ಮನ್ನು ಪುನರುತ್ಥಾನ ದಿನದಂದು ಒಟ್ಟುಗೂಡಿಸುತ್ತಾನೆ. ಅದರಲ್ಲಿ ಸಂದೇಹವೇ ಇಲ್ಲ. ಆದರೆ ಜನರ ಪೈಕಿ ಹೆಚ್ಚಿನವರೂ ಅರಿತುಕೊಳ್ಳುವುದಿಲ್ಲ." (ಕುರ್‌ಆನ್ 45:24-26)

ಅಲ್ಲಾಹು ಮರಣ ಹೊಂದಿದವರನ್ನು ಪುನರ್ಜೀವಗೊಳಿಸುವನು ಎಂಬ ವಿಷಯದಲ್ಲಿ ಸಂದೇಹವೇ ಇಲ್ಲ. ಆದರೆ ಅದು ಅವನ ಪೂರ್ವನಿಗದಿತ ಕಾರ್ಯತಂತ್ರಕ್ಕೆ ಅನುಸಾರವಾಗಿರುತ್ತದೆ. ಅಂದರೆ ಒಂದು ದಿನ ಈ ವಿಶ್ವ ಸಂಪೂರ್ಣ ನಾಶವಾಗಿ ಜನರೆಲ್ಲರೂ ವಿಚಾರಣೆಗಾಗಿ ಅಲ್ಲಾಹನ ಮುಂದೆ ನಿಲ್ಲುವರು. ಆ ದಿನವು ಪರಲೋಕ ಜೀವನದ ಮೊದಲ ದಿನವಾಗಿರುವುದು. ಆ ಜೀವನಕ್ಕೆ ಕೊನೆಯೆಂಬುದೇ ಇಲ್ಲ. ಅಂದು ಅಲ್ಲಾಹು ಜನರ ಕರ್ಮಗಳಿಗೆ ಅನುಗುಣವಾಗಿ ರಕ್ಷೆ ಮತ್ತು ಶಿಕ್ಷೆಯನ್ನು ನೀಡುವನು.

ಮರಣಾನಂತರ ಜೀವನವು ಮನುಷ್ಯನ ನೈತಿಕ ಪ್ರಜ್ಞೆ (moral consciousness)ಯ ಬೇಡಿಕೆಯಾಗಿದೆ. ಆದ್ದರಿಂದಲೇ ಅದರ ಅಗತ್ಯದ ಕುರಿತು ಪವಿತ್ರ ಕುರ್‌ಆನ್ ಸ್ಪಷ್ಟವಾಗಿ ವಿವರಿಸುತ್ತದೆ. ವಾಸ್ತವವಾಗಿ, ಮರಣಾನಂತರ ಜೀವನವೆಂಬುದು ಇಲ್ಲದೇ ಇರುತ್ತಿದ್ದರೆ ದೇವವಿಶ್ವಾಸಕ್ಕೆ ಅರ್ಥವೇ ಇರುತ್ತಿರಲಿಲ್ಲ. ಅಂತಹ ದೇವವಿಶ್ವಾಸವು ತಾನು ಸೃಷ್ಟಿಸಿದ ಸೃಷ್ಟಿಗಳ ಕುರಿತು ಯಾವುದೇ ಹೊಣೆಯೂ ಇಲ್ಲದ, ಅಂದರೆ ಸುಕೃತ್ಯಕ್ಕಾಗಿ ಬಹುಮಾನ ನೀಡದ ಮತ್ತು ದುಷ್ಕೃತ್ಯಕ್ಕಾಗಿ ದಂಡಿಸದ, ಸೃಷ್ಟಿಗಳ ಮಧ್ಯೆ ನ್ಯಾಯ ಪಾಲಿಸದ ಒಬ್ಬ ಅಸಮರ್ಥ ದೇವನ ಮೇಲಿರುವ ವಿಕಲ ವಿಶ್ವಾಸವಷ್ಟೇ ಆಗಿರುವುದು.

ಆದರೆ ಅಲ್ಲಾಹು ಸಮಗ್ರವಾಗಿ ನ್ಯಾಯ ಪಾಲಿಸುವವನು. ಮನುಷ್ಯನ ಐಹಿಕ ಜೀವನ ಕಿರಿದಾಗಿರುವುದರಿಂದ ಮತ್ತು ಈ ಭೌತಿಕ ಜೀವನ ನಶ್ವರವಾಗಿರುವುದರಿಂದ, ಒಬ್ಬ ವ್ಯಕ್ತಿ ಮಾಡಿದ ಕೆಡುಕಿಗೆ ಅನುಗುಣವಾಗಿ ಶಿಕ್ಷಿಸಲು ಇಲ್ಲಿ ಅಸಾಧ್ಯ. ಒಬ್ಬನನ್ನು ಹತ್ಯೆ ಮಾಡಿದವನಿಗೂ ನೂರು ಜನರನ್ನು ಹತ್ಯೆ ಮಾಡಿದವನಿಗೂ ಇಲ್ಲಿ ನೀಡಲಾಗುವ ಗರಿಷ್ಠ ಶಿಕ್ಷೆ ಒಂದು ಬಾರಿ ಗಲ್ಲಿಗೇರಿಸುವುದು. ಇದು ಆ ಇಬ್ಬರು ಕೊಲೆಗುಡುಕರ ಮಧ್ಯೆ ನ್ಯಾಯಪಾಲಿಸಿದಂತಾಗುವುದೇ? ಖಂಡಿತ ಇಲ್ಲ. ಒಬ್ಬ ಮಹಿಳೆಯನ್ನು ಕೆಡಿಸಿದ ಕಾರಣ ಒಬ್ಬನಿಗೆ ಇಪ್ಪತ್ತು ವರ್ಷಗಳ ಕಠಿಣ ಕಾರಾಗ್ರಹ ಶಿಕ್ಷೆ ನೀಡುವುದಾದರೆ ಹತ್ತು ಮಂದಿ ಮಹಿಳೆಯರನ್ನು ಕೆಡಿಸಿದವನಿಗೆ ಇನ್ನೂರು ವರ್ಷಗಳ ಕಠಿಣ ಕಾರಾಗ್ರಹ ಶಿಕ್ಷೆ ನೀಡಬೇಕಾದುದು ನ್ಯಾಯದ ಬೇಡಿಕೆಯಾಗಿದೆ. ಆದರೆ ಮನುಷ್ಯನೊಬ್ಬನ ಗರಿಷ್ಠ ಆಯಸ್ಸು ಕೇವಲ ನೂರ ಇಪ್ಪತ್ತು ವರ್ಷಗಳಷ್ಟೇ ಆಗಿರುವುದರಿಂದ ಅವನಿಗೆ ಇನ್ನೂರು ವರ್ಷಗಳ ಶಿಕ್ಷೆ ನೀಡುವುದು ಹೇಗೆ? ಆದ್ದರಿಂದ ಸಂಪೂರ್ಣ ನ್ಯಾಯಾಧಿಷ್ಠಿತವಾದ ಶಿಕ್ಷೆಯನ್ನು ನೀಡಲು ಇಹಲೋಕದಲ್ಲಿ ಅಸಾಧ್ಯ.

ಕೋಟ್ಯಂತರ ಯಹೂದಿಗಳ ಜನಾಂಗೀಯ ಹತ್ಯೆ ಮಾಡಿದ ಅಡಾಲ್ಫ್ ಹಿಟ್ಲರ್‌ಗೆ ಭೂಲೋಕದ ನ್ಯಾಯಾಲಯ ಕೊಟ್ಟ ಶಿಕ್ಷೆಯೇನು? ಏನೂ ಇಲ್ಲ. ಆತ ಸ್ವತಃ ಆತ್ಮಹತ್ಯೆಗೆ ಶರಣಾದನೆಂದು ಮಾತ್ರ. ಹಾಗಾದರೆ ಆತ ಕೊಂದು ಹಾಕಿದ ಲೆಕ್ಕಕ್ಕೆ ಅನುಸಾರವಾಗಿ ಆತನನ್ನು ಶಿಕ್ಷಿಸುವವರು ಯಾರು?

ಹಿರೋಷಿಮಾ ನಾಗಸಾಕಿಗಳಲ್ಲಿ ಅಣುಬಾಂಬುಗಳನ್ನು ಸುರಿಸಿ ಕೋಟ್ಯಂತರ ಜಪಾನೀಯರನ್ನು ಸಾಮೂಹಿಕವಾಗಿ ಹತ್ಯೆ ಮಾಡಿದ ಮತ್ತು ಇಂದಿಗೂ ಅದರ ಘೋರ ಪರಿಣಾಮವನ್ನು ಜನರು ಅನುಭವಿಸುವಂತೆ ಮಾಡಿದವರಿಗೆ ಭೂಲೋಕದ ನ್ಯಾಯಾಲಯ ಏನಾದರೂ ಶಿಕ್ಷೆ ನೀಡೀತೇ?

ಮದುವೆಯಾಗುವ ಆಮಿಷವೊಡ್ಡಿ ಇಪ್ಪತ್ತು ಮಂದಿ ಯುವತಿಯರೊಂದಿಗೆ ಕಾಮತೀಟೆ ತೀರಿಸಿ ಅವರೆಲ್ಲರನ್ನೂ ಬರ್ಬರವಾಗಿ ಕೊಂದು ಹಾಕಿದವನಿಗೆ ಭೂಲೋಕದ ನ್ಯಾಯಾಲಯ ನೀಡುವ ಶಿಕ್ಷೆ ಆತನ ಕ್ರೌರ್ಯಕ್ಕೆ ಸಮಾನವಾದ ಶಿಕ್ಷೆಯಾಗಿರುವುದೇ? ಮನೆಮಂದಿಯನ್ನು ಕೊಂದು ಹಾಕಿ, ಮಹಿಳೆಯರ ಮೇಲೆ ಅತ್ಯಾಚಾರ ಮಾಡಿ, ಮನೆಯನ್ನು ಕೊಳ್ಳೆಹೊಡೆದು, ಬೀದಿಪಾಲಾದ ಎಷ್ಟೋ ಮುಗ್ಧ ಜನರು ಕೋಮುಗಲಭೆಗಳ ಬಲಿಪಶುಗಳಾಗಿ ಮಾರ್ಪಟ್ಟಿದ್ದಾರೆ. ಇವರ ಕಣ್ಣುಗಳಿಂದ ಸುರಿಯುವ ಒಂದೊಂದು ಹನಿಯೂ ನ್ಯಾಯವನ್ನು ಬೇಡುತ್ತಿವೆ. ಆದರೆ ಕೋಮುಗಲಭೆಗಳ ಪ್ರಾಯೋಜಕರು ಅಧಿಕಾರದ ಕುರ್ಚಿಯಲ್ಲಿ ಕುಳಿತು ರಾಜಾರೋಷವಾಗಿ ರಾಜ್ಯವನ್ನು ಆಳುತ್ತಿದ್ದಾರೆ. ಇಂತಹವರನ್ನು ಶಿಕ್ಷಿಸುವುದು ಯಾರು? ಇವರಿಗೆ ಶಿಕ್ಷೆಯೆಂಬುದೇ ಇಲ್ಲವೇ?

ನಮ್ಮ ಈ ಐಹಿಕ ಜೀವನವನ್ನು ಬಿಟ್ಟರೆ ಇನ್ನೇನೂ ಇಲ್ಲ. ನಾವಿಲ್ಲಿ ಬದುಕುತ್ತೇವೆ ಮತ್ತು ಸಾಯುತ್ತೇವೆ. ಕಾಲದ ಹೊರತು ಇನ್ನೇನೂ ನಮ್ಮನ್ನು ನಾಶಗೊಳಿಸುವುದಿಲ್ಲ ಎಂದು ಅಂದಿನ ಮಕ್ಕಾ ನಿವಾಸಿಗಳಾದ ಬಹುದೇವಾರಾಧಕರು ಹೇಳಿದಂತೆ ಇಂದು ತಮ್ಮನ್ನು ತಾವೇ ವಿಚಾರವಾದಿಗಳೆಂದು ಘೋಷಿಸಿಕೊಳ್ಳುವವರು ಹೇಳುತ್ತಿದ್ದಾರೆ. ಆದರೆ ಈ ಮೇಲಿನ ಪ್ರಶ್ನೆಗಳಿಗೆ ಅವರ ಬಳಿ ಸೂಕ್ತ ಉತ್ತರವೇ ಇಲ್ಲ.

ಮರಣಾನಂತರ ಜೀವನವೆಂಬುದು ಇಲ್ಲವೆಂದಾದರೆ ಈ ಐಹಿಕ ಜೀವನದಲ್ಲಿ ಮಾಡುವ ಸತ್ಕಾರ್ಯಕ್ಕೆ ಯಾವ ಅರ್ಥವೂ ಇಲ್ಲ. ಮಾನವೀಯತೆಗೆ ಬೆಲೆಯೇ ಇಲ್ಲ. ನಾವೇನೇ ಮಾಡಿದರೂ

ಅದಕ್ಕಿರುವ ಶಿಕ್ಷೆ ಈ ಭೂಲೋಕಕ್ಕಷ್ಟೇ ಸೀಮಿತ ಎಂದು ಭಾವಿಸುವವರಿಗೆ ದುಷ್ಕೃತ್ಯವೆಸಗಲು ಯಾವುದೇ ಅಡ್ಡಿಯೂ ಇರುವುದಿಲ್ಲ. ನ್ಯಾಯದ ಕಣ್ತಪ್ಪಿಸಿ, ಲಂಚ ಕೊಟ್ಟು ಅಥವಾ ಪ್ರಭಾವಗಳನ್ನು ಬಳಸಿ ಇಲ್ಲಿ ಏನು ಮಾಡಲೂ ಸಾಧ್ಯವಿದೆ. ಸತ್ಯ, ನ್ಯಾಯ, ಮಾನವೀಯತೆಗಳನ್ನು ಆಭರಣಗಳಾಗಿ ತೊಟ್ಟುಕೊಂಡ ಸಾತ್ವಿಕನಿಗೆ ಇಲ್ಲಿ ದೊರೆಯುವುದು ಕೇವಲ ಅಪಹಾಸ್ಯ, ಗೇಲಿ ಮತ್ತು ನಷ್ಟಗಳು ಮಾತ್ರ. ಕೆಲವೊಮ್ಮೆ ಸತ್ಯಸಂಧನೇ ಶಿಕ್ಷೆಗೆ ಗುರಿಯಾಗುವ ಪ್ರಸಂಗಗಳೂ ಇಲ್ಲಿ ಜರಗುತ್ತವೆ. ಹೀಗಿರುವಾಗ ಬದುಕು ಇಹಲೋಕಕ್ಕೆ ಸೀಮಿತವಾಗಿದೆ ಎಂದು ವಾದಿಸುವವರ ಪ್ರಕಾರ ಈ ಬದುಕಿಗೆ ಯಾವ ಅರ್ಥವೂ ಇಲ್ಲ. ಅವನೊಬ್ಬ ಸಾತ್ವಿಕನಾಗಿದ್ದ ಎಂದು ಇತಿಹಾಸದ ಪುಟಗಳಲ್ಲಿ ದಾಖಲಾಗುವುದಷ್ಟೇ ಅಲ್ಲದೆ ಸಾತ್ವಿಕನೊಬ್ಬನ ಒಳ್ಳೆಯತನಕ್ಕೆ ತಕ್ಕ ಪ್ರತಿಫಲ ಈ ಜಗತ್ತಿನಲ್ಲಿ ದೊರೆಯುವುದೇ ಇಲ್ಲ.

ಮಾನವನು ಇಹಲೋಕ ಜೀವನದಲ್ಲಿ ಮಾಡಿದ ಪ್ರತಿಯೊಂದು ಕರ್ಮಗಳ ಕುರಿತೂ –ಅದು ಒಳಿತಾಗಿದ್ದರೂ ಕೆಡುಕಾಗಿದ್ದರೂ– ಕೂಲಂಕುಶ ವಿಚಾರಣೆ ಮಾಡಲಾಗುವ ಒಂದು ದಿನ ಬರಲೇಬೇಕು ಮತ್ತು ಒಳಿತಿಗೆ ಅನುಗುಣವಾಗಿ ಬಹುಮಾನ ಮತ್ತು ಕೆಡುಕಿಗೆ ಅನುಗುಣವಾಗಿ ದಂಡನೆ ದೊರೆಯಲೇಬೇಕೆಂದು ಮನುಷ್ಯನ ಆಂತರಿಕ ಪ್ರಜ್ಞೆ ಬೇಡುತ್ತದೆ. ಪವಿತ್ರ ಕುರ್‌ಆನ್ ಹೇಳುತ್ತದೆ:

﴿ وَقَالَ ٱلَّذِينَ كَفَرُوا۟ لَا تَأْتِينَا ٱلسَّاعَةُ ۖ قُلْ بَلَىٰ وَرَبِّى
لَتَأْتِيَنَّكُمْ عَٰلِمِ ٱلْغَيْبِ ۖ لَا يَعْزُبُ عَنْهُ مِثْقَالُ ذَرَّةٍ
فِى ٱلسَّمَٰوَٰتِ وَلَا فِى ٱلْأَرْضِ وَلَآ أَصْغَرُ مِن ذَٰلِكَ
وَلَآ أَكْبَرُ إِلَّا فِى كِتَٰبٍ مُّبِينٍ ٣ لِّيَجْزِىَ
ٱلَّذِينَ ءَامَنُوا۟ وَعَمِلُوا۟ ٱلصَّٰلِحَٰتِ ۚ أُو۟لَٰٓئِكَ لَهُم
مَّغْفِرَةٌ وَرِزْقٌ كَرِيمٌ ٤ وَٱلَّذِينَ سَعَوْ فِىٓ ءَايَٰتِنَا
مُعَٰجِزِينَ أُو۟لَٰٓئِكَ لَهُمْ عَذَابٌ مِّن رِّجْزٍ أَلِيمٌ ٥ ﴾

“ಅವಿಶ್ವಾಸಿಗಳು ಹೇಳುತ್ತಾರೆ: ಅಂತ್ಯದಿನವೆಂಬುದು ಬರುವುದೇ ಇಲ್ಲ. (ಓ ಪ್ರವಾದಿ! ಅವರೊಂದಿಗೆ) ಹೇಳು: ಹೌದು! ಅಗೋಚರ ವಿಷಯಗಳನ್ನು ಅರಿತಿರುವ ನನ್ನ ಪ್ರಭುವಿನಾಣೆ ಸತ್ಯ! ಅದು ನಿಮಗೆ ಖಂಡಿತವಾಗಿಯೂ ಬರುತ್ತದೆ. ಆಕಾಶಗಳಲ್ಲಾಗಲಿ, ಭೂಮಿಯಲ್ಲಾಗಲಿ ಒಂದು ಅಣುವಿನ ತೂಕದಷ್ಟಿರುವುದು ಕೂಡ -ಅದಕ್ಕಿಂತ ದೊಡ್ಡದಾಗಿರುವುದು ಅಥವಾ ಚಿಕ್ಕದಾಗಿರುವುದು ಕೂಡ- ಅವನ ಜ್ಞಾನದಿಂದ ಪಾರಾಗಲು ಸಾಧ್ಯವಿಲ್ಲ. ಎಲ್ಲವೂ ಒಂದು ಸುಸ್ಪಷ್ಟ ಗ್ರಂಥದಲ್ಲಿ ದಾಖಲಿಸಲ್ಪಟ್ಟಿವೆ. ಅದು ಯಾಕೆಂದರೆ, ವಿಶ್ವಾಸವಿಟ್ಟವರಿಗೆ ಮತ್ತು ಸತ್ಕರ್ಮವೆಸಗಿದವರಿಗೆ ಪ್ರತಿಫಲ ನೀಡುವ ಸಲುವಾಗಿದೆ. ಅಂತಹವರಿಗೆ ಕ್ಷಮೆಯೂ ಗೌರವಾರ್ಹವಾದ ಅನ್ನಾಧಾರವೂ ಇದೆ. ನಮ್ಮ ದೃಷ್ಟಾಂತಗಳನ್ನು ನಿಷ್ಫಲಗೊಳಿಸಲು ಯತ್ನಿಸುವವರಾರೋ ಅವರಿಗೆ ಕಠಿಣವಾದ ಯಾತನಾಮಯ ಶಿಕ್ಷೆಯಿದೆ.” (ಕುರ್‌ಆನ್ 34:3-5)

ನ್ಯಾಯ ಮತ್ತು ಕರುಣೆಯೆಂಬ ದೈವಿಕ ಗುಣವಿಶೇಷಣಗಳು ಪುನರುತ್ಥಾನ ದಿನ ಅದರ ಸಮಗ್ರರೂಪದಲ್ಲಿ ಪ್ರಕಟಗೊಳ್ಳುತ್ತವೆ. ಶಾಶ್ವತ ಸೌಭಾಗ್ಯವು ತಮ್ಮನ್ನು ನಿರೀಕ್ಷಿಸುತ್ತಿದೆ ಎಂಬ ಹಂಬಲದೊಂದಿಗೆ ಐಹಿಕ ಜೀವನದಲ್ಲಿ ಕಷ್ಟ ನಷ್ಟಗಳನ್ನು ಅನುಭವಿಸಿದ, ತ್ಯಾಗಗಳನ್ನು ಸಹಿಸಿದ ವಿಶ್ವಾಸಿಗಳಿಗೆ ಅಂದು ಅಲ್ಲಾಹು ತನ್ನ ಕರುಣೆಯನ್ನು ಪೂರ್ಣವಾಗಿ ಧಾರೆಯೆರೆಯುತ್ತಾನೆ. ಆದರೆ ಅವನ ವಿಧಿ ನಿಷೇಧಗಳನ್ನು ಧಿಕ್ಕರಿಸಿ, ಮರಣಾನಂತರ ಜೀವನವನ್ನು ನಿಷೇಧಿಸಿ, ಸ್ವೇಚ್ಛೆಯ ದಾಸನಾಗಿ ಬದುಕಿದವರಿಗೆ ಅಲ್ಲಿ ಕಠಿಣ ಶಿಕ್ಷೆಯ ಹೊರತು ಬೇರೇನೂ ದೊರೆಯುವುದಿಲ್ಲ. ಈ ಎರಡು ವಿಧದ ಜನರನ್ನು ಸ್ಪಷ್ಟವಾಗಿ ಬೇರ್ಪಡಿಸುತ್ತಾ ಪವಿತ್ರ ಕುರ್‌ಆನ್ ಹೇಳುತ್ತದೆ:

﴿ أَفَمَن وَعَدْنَٰهُ وَعْدًا حَسَنًا فَهُوَ لَٰقِيهِ
كَمَن مَّتَّعْنَٰهُ مَتَٰعَ ٱلْحَيَوٰةِ ٱلدُّنْيَا ثُمَّ هُوَ يَوْمَ
ٱلْقِيَٰمَةِ مِنَ ٱلْمُحْضَرِينَ ٦١ ﴾

“ನಾವು ಯಾರಿಗೆ ಉತ್ತಮ ವಾಗ್ದಾನವನ್ನು ನೀಡಿ, ಆ ವಾಗ್ದಾನವು ಸತ್ಯವಾಗಿ ನೆರವೇರುವುದನ್ನು ಕಂಡವನು ಮತ್ತು ಯಾರಿಗೆ ನಾವು ಇಹಲೋಕ ಜೀವನದ ಸುಖಲೋಲುಪತೆಗಳನ್ನು ಆಸ್ವಾದಿಸುವಂತೆ ಮಾಡಿ ಪುನರುತ್ಥಾನ ದಿನದಂದು (ಶಿಕ್ಷೆಗಾಗಿ) ಹಾಜರುಗೊಳಿಸಲ್ಪಟ್ಟವರಲ್ಲಿ ಸೇರಿದವನು ಸಮಾನರಾಗುವರೇ?” (ಕುರ್‌ಆನ್ 28:61)

ಇಲ್ಲ ಎಂದು ಮನುಷ್ಯನ ಆಂತರಿಕ ಪ್ರಜ್ಞೆ ಹೇಳುತ್ತದೆ. ಇಹಲೋಕ ಜೀವನವು ಮರಣಾನಂತರದ ಶಾಶ್ವತ ಜೀವನಕ್ಕಿರುವ ತಯಾರಿಯಾಗಿದೆ. ಆದರೆ ಯಾರು ಆ ಮರಣಾನಂತರ ಶಾಶ್ವತ ಜೀವನವನ್ನು ನಿಷೇಧಿಸುತ್ತಾನೋ ಅವನು ತನ್ನ ಸ್ವೇಚ್ಛೆಗಳ ಗುಲಾಮನಾಗಿ ಮಾರ್ಪಡುತ್ತಾನೆ. ಐಹಿಕ ಜೀವನವೆಂದರೆ ಅದು ಕೇವಲ ಸುಖಲೋಲುಪತೆಗಳ ಆಸ್ವಾದನೆಗಿರುವ ಲೋಕವೆಂದು ಪರಿಗಣಿಸುತ್ತಾನೆ.

ಅಂತಹ ಜನರು ತಮ್ಮ ಅವಿವೇಕತನವನ್ನು ಅರಿತುಕೊಳ್ಳುವುದು ಮರಣದ ಸಂದರ್ಭವಾಗಿದೆ. ಆ ಸಂದರ್ಭದಲ್ಲಿ ತಮ್ಮನ್ನು ಪುನಃ ಇಹಲೋಕದತ್ತ ಮರಳಿಸುವಂತೆ ಅವರು ಅಲವತ್ತುಕೊಳ್ಳುವರು. ಅವಿಶ್ವಾಸಿಗಳ ಈ ಅಸಹಾಯಕ ಸ್ಥಿತಿ, ವಿಚಾರಣಾ ದಿನದ ಭಯ ಮತ್ತು ವಿಶ್ವಾಸಿಗಳಿಗೆ ಅಲ್ಲಾಹು ದಯಪಾಲಿಸುವ ಶಾಶ್ವತ ಸೌಭಾಗ್ಯದ ಕುರಿತು ಈ ಕೆಳಗಿನ ಕುರ್‌ಆನ್ ವಚನಗಳಲ್ಲಿ ಹೃದಯಂಗಮ-ವಾಗಿ ಚಿತ್ರಿಸಲಾಗಿದೆ.

حَتَّىٰٓ إِذَا جَآءَ أَحَدَهُمُ ٱلۡمَوۡتُ قَالَ رَبِّ ٱرۡجِعُونِ
﴿٩٩﴾ لَعَلِّيٓ أَعۡمَلُ صَٰلِحٗا فِيمَا تَرَكۡتُۚ كَلَّآۚ إِنَّهَا كَلِمَةٌ
هُوَ قَآئِلُهَاۖ وَمِن وَرَآئِهِم بَرۡزَخٌ إِلَىٰ يَوۡمِ يُبۡعَثُونَ ﴿١٠٠﴾
فَإِذَا نُفِخَ فِي ٱلصُّورِ فَلَآ أَنسَابَ بَيۡنَهُمۡ يَوۡمَئِذٖ وَلَا
يَتَسَآءَلُونَ ﴿١٠١﴾ فَمَن ثَقُلَتۡ مَوَٰزِينُهُۥ فَأُوْلَٰٓئِكَ هُمُ
ٱلۡمُفۡلِحُونَ ﴿١٠٢﴾ وَمَنۡ خَفَّتۡ مَوَٰزِينُهُۥ فَأُوْلَٰٓئِكَ
ٱلَّذِينَ خَسِرُوٓاْ أَنفُسَهُمۡ فِي جَهَنَّمَ خَٰلِدُونَ ﴿١٠٣﴾ تَلۡفَحُ
وُجُوهَهُمُ ٱلنَّارُ وَهُمۡ فِيهَا كَٰلِحُونَ ﴿١٠٤﴾ أَلَمۡ تَكُنۡ
ءَايَٰتِي تُتۡلَىٰ عَلَيۡكُمۡ فَكُنتُم بِهَا تُكَذِّبُونَ ﴿١٠٥﴾ قَالُواْ
رَبَّنَا غَلَبَتۡ عَلَيۡنَا شِقۡوَتُنَا وَكُنَّا قَوۡمٗا ضَآلِّينَ
﴿١٠٦﴾ رَبَّنَآ أَخۡرِجۡنَا مِنۡهَا فَإِنۡ عُدۡنَا فَإِنَّا ظَٰلِمُونَ ﴿١٠٧﴾
قَالَ ٱخۡسَـُٔواْ فِيهَا وَلَا تُكَلِّمُونِ ﴿١٠٨﴾ إِنَّهُۥ كَانَ فَرِيقٞ مِّنۡ
عِبَادِي يَقُولُونَ رَبَّنَآ ءَامَنَّا فَٱغۡفِرۡ لَنَا وَٱرۡحَمۡنَا وَأَنتَ
خَيۡرُ ٱلرَّٰحِمِينَ ﴿١٠٩﴾ فَٱتَّخَذۡتُمُوهُمۡ سِخۡرِيًّا حَتَّىٰٓ أَنسَوۡكُمۡ
ذِكۡرِي وَكُنتُم مِّنۡهُمۡ تَضۡحَكُونَ ﴿١١٠﴾ إِنِّي جَزَيۡتُهُمُ
ٱلۡيَوۡمَ بِمَا صَبَرُوٓاْ أَنَّهُمۡ هُمُ ٱلۡفَآئِزُونَ ﴿١١١﴾

"ಅವರಲ್ಲಿ (ಅವಿಶ್ವಾಸಿಗಳಲ್ಲಿ) ಒಬ್ಬನಿಗೆ ಮರಣವು ಆಸನ್ನ-ವಾಗುವಾಗ ಅವನು ಹೇಳುವನು: ಓ ನನ್ನ ರಬ್ಬೇ! ನನ್ನನ್ನು (ಇಹಲೋಕಕ್ಕೆ) ಮರಳಿಸು. ಹಾಗೆ ಮರಳಿಸುವುದಾದರೆ ನಾನು ಮಾಡದೆ ಬಿಟ್ಟಿರುವ ಸತ್ಕರ್ಮಗಳನ್ನು ಮಾಡುವೆನು. ಇಲ್ಲ! ಅದು ಅವನು (ಅವಿಶ್ವಾಸಿ) ಬಾಯಿಂದ ಹೇಳುವ ಒಂದು ವಚನ ಮಾತ್ರ. ಅವರನ್ನು ಪುನರುತ್ಥಾನಗೊಳಿಸುವ ದಿನದ ತನಕ ಅವರ ಹಿಂದೆ ಒಂದು ಬರ್ಝಖ್ (ತಡೆ) ಇರುವುದು. ತರುವಾಯ ಕಹಳೆಯಲ್ಲಿ ಊದಲಾದರೆ ಆ ದಿನ ಅವರ ನಡುವೆ ಯಾವುದೇ ಸಂಬಂಧಗಳೂ ಇರಲಾರದು. ಅವರು ಪರಸ್ಪರರ ಬಗ್ಗೆ ವಿಚಾರಿಸಲಾರರು. ಯಾರ (ಸತ್ಕರ್ಮಗಳ) ತಕ್ಕಡಿ ಭಾರವಾಗುವುದೋ ಅವರು ಯಶಸ್ವಿಯಾ-ಗುವರು. ಯಾರ (ಸತ್ಕರ್ಮಗಳ) ತಕ್ಕಡಿಯು ಹಗುರವಾಗುವುದೋ ಅವರು ಸ್ವತಃ ತಮ್ಮನ್ನೇ ಕಳೆದುಕೊಳ್ಳುವರು ಮತ್ತು ನರಕಾಗ್ನಿಯ-ಲ್ಲಿ ವಾಸಿಸುವರು. ನರಕಾಗ್ನಿಯು ಅವರ ಮುಖಗಳನ್ನು ಕರಟಿ ಹಾಕುವುದು ಮತ್ತು ವಿರೂಪಗೊಂಡ ತುಟಿಗಳೊಂದಿಗೆ ಅವರು ಹಲ್ಲುಕಿಸಿಯುವರು. ನನ್ನ ವಚನಗಳನ್ನು ನಿಮಗೆ ಓದಿಕೊಡಲಾ-ಗಲಿಲ್ಲವೇ ಮತ್ತು ನೀವು ಅದನ್ನು ನಿರಾಕರಿಸಲಿಲ್ಲವೇ? (ಎಂದು ಅವರೊಂದಿಗೆ ಕೇಳಲಾದಾಗ) ಅವರು ಹೇಳುವರು: ನಮ್ಮ ರಬ್ಬೇ! ನಮ್ಮ ದೌರ್ಭಾಗ್ಯವು ನಮ್ಮನ್ನು ಸೋಲಿಸಿತು ಮತ್ತು ನಾವು ಪಾಪಿಗಳಾದ ಜನತೆಯಾಗಿದ್ದೆವು. ನಮ್ಮ ರಬ್ಬೇ, ನಮ್ಮನ್ನು ಇದರಿಂದ ಹೊರತೆಗೆ. ನಾವೇನಾದರೂ (ಪುನಃ ಪಾಪದೆಡೆಗೆ) ಮರಳಿದರೆ ಖಂಡಿತವಾಗಿಯೂ ನಾವು ಅಕ್ರಮಿಗಳಾಗಿರುವೆವು. ಅವನು (ಅಲ್ಲಾಹು) ಹೇಳುವನು: ಹೇಯ ನಡತೆಯೊಂದಿಗೆ ಇದರಲ್ಲೇ ಇರಿ. ನನ್ನೊಂದಿಗೆ ಮಾತನಾಡಬೇಡಿ. ಖಂಡಿತವಾಗಿಯೂ (ಇಹಲೋ-ಕದಲ್ಲಿ) ನನ್ನ ದಾಸರಲ್ಲಿ, ನಮ್ಮ ರಬ್ಬೇ! ನಾವು ವಿಶ್ವಾಸವಿಟ್ಟಿದ್ದೇವೆ. ನಮ್ಮನ್ನು ಕ್ಷಮಿಸು. ನಮ್ಮ ಮೇಲೆ ಕರುಣೆ ತೋರು. ಕರುಣೆ ತೋರು-ವವರಲ್ಲಿ ನೀನು ಅತ್ಯುತ್ತಮನಾಗಿರುವೆ ಎಂದು ಹೇಳುತ್ತಿದ್ದ ಒಂದು ಪಂಗಡವಿತ್ತು. ನನ್ನ ಸ್ಮರಣೆಯನ್ನು ಮರೆತುಬಿಡುವ ರೀತಿಯಲ್ಲಿ ನೀವು ಅವರನ್ನು ಹಾಸ್ಯವಸ್ತುವಾಗಿ ಪರಿಗಣಿಸಿದಿರಿ. ನೀವು ಅವರನ್ನು ನೋಡಿ ನಗುತ್ತಿದ್ದಿರಿ. ಖಂಡಿತವಾಗಿಯೂ ಈ ದಿನ ನಾನು ಅವರ ಸಹನೆಗೆ ಪ್ರತಿಫಲ ನೀಡಿರುವೆನು. ಸತ್ಯವಾಗಿಯೂ ಅವರೇ ವಿಜಯ-ಗಳಿಸಿದವರು." (ಕುರ್‌ಆನ್ 23:99-111)

ಮರಣಾನಂತರ ಜೀವನದ ಮೇಲಿರುವ ವಿಶ್ವಾಸವು ಕೇವಲ ಪರಲೋಕ ವಿಜಯಕ್ಕಷ್ಟೇ ಸೀಮಿತವಲ್ಲ; ಬದಲಾಗಿ ಅದು ಇಹಲೋಕ ಜೀವನದಲ್ಲಿ ಕೂಡ ಶಾಂತಿ ಮತ್ತು ನೆಮ್ಮದಿ-ಯನ್ನು ತಂದುಕೊಡುತ್ತದೆ.

ಪ್ರವಾದಿ ಮುಹಮ್ಮದ್(ﷺ)ರವರ ಆಗಮನ ಪೂರ್ವ ಅರೇಬಿಯಾದ ಜನತೆಯ ಕುರಿತು ಆಲೋಚಿಸಿ ನೋಡಿ. ಕೊಲೆಗಡುಕರೂ, ಯುದ್ಧದಾಹಿಗಳೂ, ವಿಷಯ ಲಂಪಟರೂ, ಕ್ರೂರರೂ ಆಗಿದ್ದ ಆ ಜನತೆಯನ್ನು ಮರಣಾನಂತರ ಜೀವನವೆಂಬ ಪರಿಕಲ್ಪನೆಯು ಮಾದರೀ ಯೋಗ್ಯ ಸಮಾಜವಾಗಿ ಮಾರ್ಪಡಿಸಿತು.

ಯಾವ ಸಮಾಜವು ಅಲ್ಲಾಹನ ಮೇಲೆ ಮತ್ತು ಪರಲೋಕದ ಮೇಲೆ ವಿಶ್ವಾಸವಿಟ್ಟು ನಿಷ್ಠೆಯೊಂದಿಗೆ ಜೀವಿಸುತ್ತದೋ ಆ ಸಮಾಜದಲ್ಲಿ ದುಷ್ಕೃತ್ಯಗಳು ಗೋಚರಿಸುವುದು ತೀರಾ ವಿರಳ. ಕಾರಣ ತಾವು ಮಾಡಿದ ಕೃತ್ಯಗಳ ಕೂಲಂಕುಶ ವಿಚಾರಣೆ ನಡೆಯಲಿದೆ, ಇಹಲೋಕದಲ್ಲಿ ಶಿಕ್ಷೆಯಿಂದ ಪಾರಾದರೂ ಪರಲೋಕದಲ್ಲಿ ದೈವಿಕ ನ್ಯಾಯಾಲಯದಿಂದ ಪಾರಾಗಲು ಸಾಧ್ಯವಿಲ್ಲವೆಂದು ಆ ಸಮಾಜದ ಪ್ರತಿಯೊಬ್ಬ ಸದಸ್ಯನೂ ಅರಿತಿರುತ್ತಾನೆ. ಒಳಿತಿಗೆ ಹತ್ತುಪಟ್ಟು ಪುಣ್ಯವೂ, ಕೆಡುಕಿಗೆ ತತ್ಸಮಾನ ಶಿಕ್ಷೆಯೂ ದೊರೆಯುತ್ತದೆಂಬ ಇಸ್ಲಾಮಿನ ತತ್ವವನ್ನು ವಸ್ತುನಿಷ್ಠವಾಗಿ ಅಂಗೀಕರಿಸಿ ಕಾರ್ಯಪ್ರವೃತ್ತವಾಗುವ ಒಂದು ಸಮಾಜದಲ್ಲಿ ಉನ್ನತಿ, ಪ್ರಗತಿ, ಶಾಂತಿ, ನೆಮ್ಮದಿಗಳಷ್ಟೇ ಕಾಣಲು ಸಾಧ್ಯ.

ಆದ್ದರಿಂದ ಮರಣಾನಂತರ ಜೀವನವೆಂಬ ಪರಿಕಲ್ಪನೆಯನ್ನು ನಿಷೇಧಿಸಿದರೆ ಅದರ ಘೋರ ಪರಿಣಾಮವನ್ನು ಪರಲೋಕದಲ್ಲಿ ಮಾತ್ರವಲ್ಲದೆ ಇಹಲೋಕದಲ್ಲೂ ಎದುರಿಸಬೇಕಾಗುತ್ತದೆ. ಇದು ಕೇವಲ ವ್ಯಕ್ತಿಯನ್ನು ಮಾತ್ರವಲ್ಲದೆ ಸಮಾಜವನ್ನೂ ಬಾಧಿಸುತ್ತದೆ. ಮರಣಾನಂತರ ಜೀವನವನ್ನು ಒಂದು ಸಮಾಜವು ಪೂರ್ಣವಾಗಿ ನಿಷೇಧಿಸುವಾಗ ಆ ಸಮಾಜದಲ್ಲಿ ಕೆಡುಕುಗಳ ವಿಜೃಂಭನೆ ಅಧಿಕವಾಗಿ ಕೊನೆಗೆ ಅದು ನಾಶವಾಗಿ ಹೋಗುತ್ತದೆ. ಇತಿಹಾಸದಲ್ಲಿ ಇದಕ್ಕೆ ಬೇಕಾದಷ್ಟು ಉದಾಹರಣೆಗಳಿವೆ. ■

---

*43 ನೇ ಪುಟದಿಂದ*

## ಪ್ರವಾದಿತ್ವ ಮತ್ತು ಪಾಂಡಿತ್ಯ

ಅದೆಷ್ಟೋ ಪಾಲು ಹೆಚ್ಚಾಗಿದೆ. ಅಲ್ಲಾಹನು ನೀಡುವ ಅಮಾನ್ಯವಾದ ವಹ್ಯ್ ಪ್ರವಾದಿ(ﷺ) ಯವರ ಮಹತ್ವಕ್ಕೆ ಕಾರಣ. ಪ್ರವಾದಿ(ﷺ) ಯವರ ಉಪದೇಶಗಳನ್ನು ಅನುಸರಿಸಿದವರು ಪಥಭ್ರಷ್ಟರಾಗುವುದಿಲ್ಲ ಎನ್ನುವುದು ಖಚಿತವಿದೆ. ಬೇರೆ ವಿದ್ವಾಂಸರಿಗೆಲ್ಲ ತಪ್ಪು ಸಂಭವಿಸುವ ಸಾಧ್ಯತೆಯಿದೆ. ಇನ್ನು ಒಬ್ಬ ವಿದ್ವಾಂಸರಿಗೆ ವಿಶ್ವಾಸಕಾರ್ಯಗಳು ಹಾಗೂ ಕರ್ಮಾನುಷ್ಠಾನಗಳ ವಿವರಣೆಯಲ್ಲಿ ತಪ್ಪು ಸಂಭವಿಸುವುದಿಲ್ಲ ಎಂದೇ ಭಾವಿಸೋಣ. ಆದರೆ ನಾವು ಪ್ರವಾದಿ (ﷺ) ಯವರನ್ನು ಅನುಸರಿಸಲು ಆದೇಶಿಸಲ್ಪಟ್ಟಿದ್ದೇವೆಯೇ ಹೊರತು ಅವರನ್ನಲ್ಲ. ಪ್ರವಾದಿ(ﷺ) ಯವರು ಅವರಿಗೂ ನಮಗೂ ಮಾದರಿಯಾಗಿದ್ದಾರೆ. ಇಸ್ಲಾಮಿನಲ್ಲಿ ವಿದ್ವಾಂಸರು ಅಲ್ಲಾಹನ ಗ್ರಂಥ ಮತ್ತು ಪ್ರವಾದಿಚರ್ಯೆಯನ್ನು ವಿವರಿಸಿಕೊಡುವ ಗೈಡ್‌ಗಳು ಮಾತ್ರ. ಅವರಿಗೆ ಪ್ರವಾದಿ(ﷺ) ಯವರ ಉಪದೇಶಗಳಿಗೆ ತಿದ್ದುಪಡಿ ತರುವ ಹಾಗೂ ಶರೀಅತ್ತನ್ನು ನಿಸ್ತೇಜಗೊಳಿಸುವ ತರೀಖತ್ತನ್ನು ಪ್ರಸ್ತುತಪಡಿಸುವ ಯಾವುದೇ ಅಧಿಕಾರವಿಲ್ಲ. ■

---

*37 ನೇ ಪುಟದಿಂದ*

## ಪ್ರವಾದಿ ನೂಹ್(عليه السلام): ದೌತ್ಯ ಮತ್ತು ಸಂದೇಶ

ಕುಟುಂಬವನ್ನು ರಕ್ಷಿಸುತ್ತೇನೆ ಎಂಬ ಅಲ್ಲಾಹನ ವಾಗ್ದಾನವಿತ್ತು. ಆದರೆ ಮಗನು ಶಿಕ್ಷೆಯಿಂದ ಪಾರಾಗಲಿಲ್ಲ. ಅದರಿಂದ ದುಃಖಿತರಾಗಿ ನೂಹ್(عليه السلام) ಹೀಗೆ ಹೇಳಿದ್ದರು. ಅದಕ್ಕೆ ಉತ್ತರವಾಗಿ ಅಲ್ಲಾಹನು ಹೇಳುತ್ತಾನೆ:

﴿قَالَ يَٰنُوحُ إِنَّهُۥ لَيْسَ مِنْ أَهْلِكَ ۖ إِنَّهُۥ عَمَلٌ غَيْرُ صَٰلِحٍ ۖ فَلَا تَسْـَٔلْنِ مَا لَيْسَ لَكَ بِهِۦ عِلْمٌ ۖ إِنِّىٓ أَعِظُكَ أَن تَكُونَ مِنَ ٱلْجَٰهِلِينَ ٤٦﴾

“ಓ ನೂಹ್, ಅವನು ನಿನ್ನ ಕುಟುಂಬದವನಲ್ಲ. ಅವನೊಂದು ಕೆಟ್ಟು ಹೋದ ಕಾರ್ಯ. ಆದುದರಿಂದ ಯಾವುದರ ನಿಜಸ್ಥಿತಿಯು ನಿನಗೆ ತಿಳಿದಿಲ್ಲವೋ ಆ ಕುರಿತು ನನ್ನೊಡನೆ ನಿವೇದಿಸಬೇಡ.” (11:46)

ಓರ್ವ ಸಂದೇಶವಾಹಕರ ಬಂಧುಗಳು ಕೇವಲ ರಕ್ತಸಂಬಂಧವಿರುವವರಲ್ಲ, ಬದಲಾಗಿ ಆದರ್ಶದಲ್ಲಿ ಸಂಬಂಧ ಹೊಂದಿರುವವರು ನೈಜ ಬಂಧುಗಳಾಗಿದ್ದಾರೆಂದು ಅಲ್ಲಾಹನು ಸ್ಪಷ್ಟಪಡಿಸುತ್ತಾನೆ.

ದೇವಧಿಕ್ಕಾರದ ಹೆಸರಲ್ಲಿ ಕೇವಲ ಪ್ರವಾದಿ ನೂಹ್(عليه السلام) ರ ಜನಾಂಗ ಮಾತ್ರ ಶಿಕ್ಷಿಸಲ್ಪಟ್ಟಿದ್ದಲ್ಲ. ಇತರ ಬೇರೆ ಸಮುದಾಯಗಳು ಕೂಡಾ ಶಿಕ್ಷೆಗೆ ಪಾತ್ರವಾಗಿದೆ. ಇಸ್ಲಾಮ್ ಗತಕಾಲದ ಸಂಭವಗಳಿಂದ ಪಾಠ ಕಲಿಯಬೇಕೆಂದು ಆಜ್ಞಾಪಿಸುತ್ತದೆ. ಎಲ್ಲದಕ್ಕೂ ಕಾಲವು ಸಾಕ್ಷಿಯಾಗಿದೆ. ಅಲ್ಲಾಹನು ಹೇಳುತ್ತಾನೆ:

“ಕಾಲದಾಣೆ, ನಿಜವಾಗಿ ಮನುಷ್ಯನು ಮಹಾ ನಷ್ಟದಲ್ಲಿದ್ದಾನೆ. ಸತ್ಯವಿಶ್ವಾಸ ಸ್ವೀಕರಿಸಿದ, ಸತ್ಕರ್ಮ ಮಾಡುತ್ತಿದ್ದ ಮತ್ತು ಪರಸ್ಪರ ಸತ್ಯ ಹಾಗೂ ಸಹನೆಯನ್ನು ಉಪದೇಶಿಸುತ್ತಿದ್ದವರ ಹೊರತು.” (103:1-3) ■